# ಕೊರವಂಜಿ

ಫೆಬ್ರುವರಿ ೧೯೪೩




ಸಂಪಾದಕರು :
ಶ್ರೀ॥ ರಾ. ಶಿ.

ಸಲಹೆಗಾರರು :
ಶ್ರೀ॥ ನಾ. ಕಸ್ತೂರಿ

ಚಿತ್ರಕಾರರು :
ಶ್ರೀ॥ ಆರ್. ಕೆ. ಲಕ್ಷ್ಮಣ್





ಬಿಡಿ ಪತ್ರಿಕೆ
ಎರಡಾಣೆ


ತಿಳಿನಗೆಯ ಮಾಸ ಪತ್ರಿಕೆ

# ಕೊ ರ ವಂ ಜಿ

ಕೊರವಂಜಿಯು ಪ್ರತಿ ತಿಂಗಳಲ್ಲಿಯೂ ಹೊರಬೀಳುವುದು.

ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನು ದ್ವೇಷಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಸಂಪಾದಕೀಯ ಪತ್ರವ್ಯವಹಾರಗಳನ್ನು—ಸಂಪಾದಕರು, ನಂ. ೧, ವೆಂಕಟರಂಗೈಯ್ಯಂಗಾರ್ ರಸ್ತೆ, ಮಲ್ಲೇಶ್ವರ, ಬೆಂಗಳೂರು, ಇವರಲ್ಲಿ ನಡೆಸಬೇಕು.

ವ್ಯವಸ್ಥಾಪಕರಲ್ಲಿ ಮಿಕ್ಕ ವಿಷಯಗಳನ್ನು ಪ್ರಸ್ತಾಪಿಸಬೇಕು.

ವ್ಯವಸ್ಥಾಪಕರು,
ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ರೂ. 2-0-0**
**ಬಿಡಿ ಪ್ರತಿ 0-2-0**

---

## ವಿಷಯಾನುಕ್ರಮಣಿಕೆ



ಸಂಪುಟ ೧] ಕೊರವಂಜಿ—ಫೆಬ್ರವರಿ ೧೯೪೩ [ಸಂಚಿಕೆ ೧೧

# ಕುಹಕಿಡಿಗಳು

ಏಳನೇ ಸೇವಾದಳದವರು ಹಾರ್ಮೋನಿಯಮ್ಮನ್ನು ಸಾಮೂಹಿಕ ಸಂಗಿತಕ್ಕೆ ಉಪಯೋಗಿಸಿಕೊಂಡಿದ್ದಾರಂತೆ.

—ಆತ್ಮಸಂರಕ್ಷಣೆಗೆ ಮಾತ್ರ ಅವನ್ನು ಉಪಯೋಗಿಸುತ್ತಾರೆಂಬುದಕ್ಕೆ ಸಾಕಷ್ಟು ಸಾಕ್ಷ್ಯವಿದೆ.

* * *

ವಾಕ್ಟಲನ ಚಿತ್ರಕ್ಕೆ ವಾಣಿ ಎಂಬ ಹೆಸರೇಕೆ ? ಎಂಬ ಪ್ರಶ್ನೆ.

—ಅದೇಕೆ ಸಂಗೀತರತ್ನರು ಪಿಟೀಲನ ಕೈಯಲ್ಲಿ ಮಾತನಾಡಿಸುವುದಿಲ್ಲವೇ ?

* * *

ಕಳೆದ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಹೃದಯವು ಹೇಗೆ ಚಲಿಸುತ್ತದೆ ಎಂಬ ಪ್ರಶ್ನೆಯು ಕೇಳಲ್ಪಟ್ಟಿತಂತೆ.

—ಏನಾಶ್ಚರ್ಯ ! ಸಿವಿಲ್ ಸರ್ವಿಸಿನಲ್ಲಿಲ್ಲದ ಅಂಗದ ಕಾರ್ಯಕ್ರಮವನ್ನು ಕುರಿತು ಪ್ರಶ್ನಿಸಬಹುದೇ ?

* * *

ಇತ್ತೀಚಿನ ನಿರ್ಬಂಧಗಳನ್ನು ನೋಡಿದರೆ ಇನ್ನುಮೇಲೆ ಪತ್ರಿಕೆಗಳಿಗೆ "ಸ್ವಾತಂತ್ರ್ಯ ಪತ್ರಿಕೆಗಳು" ಎಂದು ಹೆಸರಿಡಬಹುದಲ್ಲವೇ ?

* * *

ನಮ್ಮ ಚಿರಂಜೀವಿಗೆ ಸ್ನೇಹಿತರೊಬ್ಬರು ಒಂದು ಪಿಸ್ತೂಲನ್ನು ಬಹುಮಾನ ಕೊಟ್ಟಿದ್ದಾರೆ.

—ಚಿರಂಜೀವಿಗೆ ಈಗಿಂದ ಯೋಜನೆ, ತಾನು ದೊಡ್ಡವನಾಗಿ ಪಿಸ್ತೂಲನ್ನು ಉಪಯೋಗಿಸುವ ಮೊದಲೇ ಯುದ್ಧವು ಎಲ್ಲಾದರೂ ಮುಗಿದುಹೋಗುತ್ತೋ ಎಂದು.

* * *

ಕಾಗದದ ಕಷ್ಟ-ಬೆಲೆಗಳನ್ನು ಅನುಭವಿಸಿದವರೊಬ್ಬರು 'ಇದೇನು ನಮಗೆ ಕಾಗದ ಸಿಗುವುದು ಇಷ್ಟು ಕಷ್ಟವಾದರೂ, ಮಿಲಿಯಗಟ್ಟಲೆ ಕಾಗದದ ಪ್ರತಿಗಳನ್ನು ಶತ್ರು ದೇಶಗಳ ಮೇಲೆಲ್ಲಾ ಏಕೆ ಚೆಲ್ಲುತ್ತಾರೆ' ಎಂದು ಕಾಗದ ಬರೆದಿದ್ದಾರೆ.

* * *

ಸಕ್ಕರೆಗೆ ಷಹರಿನಲ್ಲಿ ಅಭಾವವಾದರೂ ಸಿಹಿಯಾಗಿರುವ ಸಿನೀಮಾಗಳಿವೆಯಲ್ಲ!

* * *

ಮಹಾ ವಿಪತ್ಕಾರಿಯಾದ ಧೂಮಕೇತುವು ಹಿಂದಿನ ತಿಂಗಳು ಕಾಣಿಸಿಕೊಂಡಿತಂತೆ.

—ಅಂದಮೇಲೆ ಯಾರೂ ಈ ತಿಂಗಳು ಶಸ್ತ್ರವೈದ್ಯ ಮಾಡಿಸಿಕೊಳ್ಳಬಾರದಲ್ಲವೇ?

* * *

ಇದಕ್ಕೂ, ಅಮೇರಿಕಾದಿಂದ ಬಂದಿರುವ ವಿಶೇಷ ಪ್ರತಿನಿಧಿಗೂ ಏನೂ ಸಂಬಂಧವಿಲ್ಲವಂತೆ.

* * *

ಷಹರಿನ ಸೋಜಿಗ ನೋಡಿ, ಪೆಟ್ರೋಲ್ ಅಭಾವ ಹೆಚ್ಚಾದಷ್ಟೂ ಕಾರಿನ ಬೆಲೆಯೂ ಹೆಚ್ಚಾಗುತ್ತಿದೆ?

* * *

"ಕಲ್ಕತ್ತಾ ಹತ್ತಿರ ಡಂ ಡಂ" ಎಂಬ ಶಿರೋನಾಮೆ.

—ಇದೇನು ವಿಮಾನ ಧಾಳಿಯ ವಿವರಣೆಯೋ?

* *

ಅಂಚೆ ಕಚೇರಿಗಳಲ್ಲಿ ಇನ್ನುಮೇಲೆ ಮನಿಯಾರ್ಡರ್ ಫಾರಂಗಳನ್ನು ಮನೆಗೆ ಕೊಡುವುದಿಲ್ಲವಂತೆ.

—ಅಂದಮೇಲೆ ಲೇಖನಗಳನ್ನು ಯಾತರ ಮೇಲೆ ಬರೆಯುವುದು?



# ಹುರಿಗಾಳು

"ಅಕ್ಕನಿಗೆ ಹಾರ್ಮೋನಿಯಂ ತಂದು ಕೊಟ್ಟ ದಿನದಿಂದ ನಿನಗೆ ಸೈಕಲ್ ಕೊಂಡು ಕೊಡಬೇಕು ಅಂತ ಒಂದೇ ಸಮನೆ ರಂಪ ಮಾಡುತ್ತಿದ್ದೀಯಲ್ಲಾ, ನಿನಗೆ ಯಾಕೋ ಬೈಸಿಕಲ್ಲು?"—ಅಂತ ತಂದೆ ಕೇಳಿದರೆ, ಶೀನು, "ಅಕ್ಕ ಹಾರ್ಮೋನಿಯಂ ಹಿಡಿದು ಕೂತ ತಕ್ಷಣ ಎಲ್ಲಿಗಾದರೂ ದೂರ ಹೋಗುವುದಕ್ಕೆ!" ಅಂತ ಹೇಳಿಬಿಡೋದೆ?

* * *

ಅಲ್ರಿ, ಈ ಊರಿನಲ್ಲಿರುವ ಎಲ್ಲಾ ಆಸ್ಪತ್ರೆಗಳನ್ನೂ ಒಂದು ಸುತ್ತು ಸುತ್ತಾಯಿತು ಅಂತ ಹೇಳಿದಿರಲ್ಲಾ...ಹೆಂಗಸರಾಸ್ಪತ್ರೆ?" ಅಂತ ಡಾಕ್ಟರು ಕೇಳಿದರೆ, "ಅಲ್ಲೇ ಸಾರ್ ನಾನು ಹುಟ್ಟಿದ್ದು" ಅಂತ ಆತ ಉತ್ತರ ಕೊಟ್ಟನಂತೆ!

* * *

ಸೌದೆ ಅಂಗಡಿಗೆ ಬೆಂಕಿ ಬಿತ್ತು. ಅದೇ ಬೀದಿ ಸುಬ್ಬಾಜೋಯಿಸರೂ ಅವರ ಮಗನೂ ನೀರು ಸೇದಲು ನಿಧಾನವಾಗಿ, ಹಗ್ಗ ಹುಡುಕಿದರು. "ಬೇಗ ಬನ್ನಿ! ಬೇಗ ಬನ್ನಿ!" ಅಂತ ಯಾರೋ ಕೂಗಿಕೊಂಡರು. ಆಗ ಜೋಯಿಸರು, "ಚಿಂತೆಯಿಲ್ಲ, ಚಿಂತೆಯಿಲ್ಲ; ಮೊನ್ನೆ ತಾನೇ ನಾನು ಆ ಅಂಗಡಿಯಿಂದ ಸೌದೆ ತಂದೆ, ನನಗೆ ಗೊತ್ತು ಅದರ ಗುಣ" ಅಂದರು!

* * *

"'ಐ.ಪಿ. ಮಿಕ್ಸ್‌ಚರ್' ಅಂತ ಬರೆದಿದೆಯಲ್ಲಾ! ಅದು ಯಾವುದು ಸಾರ್?" ಎಂದು ಕಾಂಪೌಂಡರನ್ನ ಯಾರೋ ಕೇಳಿದರು, ಸರ್ಕಾರಿ ಆಸ್ಪತ್ರೇಲಿ. ಅದಕ್ಕೆ, ಅವರು, 'ಇಲ್ಲಿಜಿಬಲ್ ಪ್ರಿಸ್ಕ್ರಿಪ್ಷನ್ ಮಿಕ್ಸ್‌ಚರ್' ಅಂತೀವಿ ಅದನ್ನ; ಡಾಕ್ಟರುಗಳು ಬರೆದುಕೊಡುವ ಚೀಟಿ ಅರ್ಥವಾಗದೆ ಇದ್ದರೆ, ಅದನ್ನ ಹುಯ್ದುಕೊಡುತ್ತೇವೆ. ಅದೇ ಇಲ್ಲಿ ಖರ್ಚು ಜಾಸ್ತಿ, ಎಲ್ಲಾ ಔಷಧಿಗಳಿಗಿಂತಲೂ ಅದು ಫಲಕೊಡುತ್ತದೆ" ಎಂದರು.

* * *

"ಅಮ್ಮಾ...ಸೀತಮ್ಮಾ...ನನ್ನನ್ನ ಅಪ್ಪ ಹೊಡೆದರು" ಎಂದು ಮಗು ಅಳುತ್ತಾ ಓಡಿಬಂದು ತಾಯಿಯ ಹತ್ತಿರ ಗೋಳಾಡಿದರೆ, ತಾಯಿ, "ಏನು ಮಾಡ್ತೋದು ಮಗು! ಎಲ್ಲಾ ನಾನೇ ಮಾಡಬೇಕು ಅಂದರೆ



"ಕೋಲು ಕೊಡುವದರಿಂದ್ಲೇ ನಾನು ಬ್ರಷ್ ಉಪಯೋಗಿಸುತ್ತೇನೆ."

ಸಾಧ್ಯವೇ ಮಗೂ? ನನಗೆ ಕೈಬಿಡುವೆಲ್ಲಿಂದ ಬರಬೇಕು" ಅಂದಳಂತೆ.

* * *

ಮೊನ್ನೆ, ಯಾವುದೋ ಹಾಸ್ಯಮಯ ಚಿತ್ರಪಟ. ನನ್ನ ಮುಂಮಗಡೆ ಕುಳಿತಿದ್ದ ಬೆನ್ನಿನ ಮಾಲೀಕನಿಗೆ ಹೇಳಿದೆ - "ಸ್ವಾಮಿ ಕೊಂಚ ಅತ್ತಲಾಗೆ ಜರುಗಿ! ನನಗೇನೂ ಕಾಣುತ್ತಿಲ್ಲ" ಅಂದೆ. ಅವರು, "ಸುಮ್ಮನಿರಿ, ಸ್ವಾಮಿ! ನನ್ನ ಬೆನ್ನನ್ನೇ ನೋಡುತ್ತಿರಿ, ನಾನು ನಕ್ಕಾಗ, ನೀವೂ ನಗಿರಿ" ಎಂದರು.

* * *

"ನೋಡಿ ಡಾಕ್ಟರೇ, ಈ ಖಾಯಿಲೆಗಾಗಿ ನಾನು ಆಗಲೇ ಸಾವಿರ ರೂಪಾಯಿ ತನಕ ಖರ್ಚುಮಾಡಿದೇನೆ" ಎಂದು ರಾಗ ಎಳೆದು ಹೊಸ ಡಾಕ್ಟರಿಗೂ ಹಳೇ ಡಾಕ್ಟರಿಗೂ ಪೈಪೋಟಿ ತಂದುಹಾಕಿ ತನ್ನ ಆರೋಗ್ಯವನ್ನು ಸಂಪಾದಿಸಿಕೊಳ್ಳೋಣ ಅಂತ ರೋಗಿ ಹೇಳಿದರೆ, ಡಾಕ್ಟರು "ಅಯ್ಯೋ ಅಯ್ಯೋ! ಆಗಲೇ ನೀವು ನನ್ನ ಹತ್ತಿರ ಬರಬಾರದಾಗಿತ್ತೇ?" ಎಂದು ಮರುಗಿದರಂತೆ.

* * *

ಹಾಸ್ಟಲ್ ವಾರ್ಡನ್ನರು ಅಡಿಗೆಯವನನ್ನು ಕರೆಸಿ—"ಏನ್ರಿ ಇದು, ಹುಡುಗರೆಲ್ಲರೂ ನಿಮ್ಮ ಅಡಿಗೆ ಶುದ್ಧ ಹೊಲಸು ಅಂತ ಕೂಗಾಡುತ್ತಾ ಇದಾರೆ, ನಿಮ್ಮನ್ನ ಮನೆಗೆ ಕಳುಹಿಸಿಬಿಡುತ್ತೇನೆ, ಹುಷಾರ್" ಅಂತ ಹೆದರಿಸಿದರು. ಆಗ ಅಡಿಗೆಯವನು, "ಅಯ್ಯೋ ಅಯ್ಯೋ, ಅವರ ಮಾತು ನಂಬಬೇಡಿ ಸಾರ್ ನೀವು, ತಾವು ಪಾಠ ಹೇಳೋದು ಶುದ್ಧ ಹೊಲಸು ಅಂತ ದಿನವೂ ಊಟದ ಹೊತ್ತಿನಲ್ಲಿ ಯದ್ವಾತದ್ವಾ ಬೈಯುತ್ತಾರೆ—ಅದನ್ನ ನಂಬಿ ತಮ್ಮನ್ನ ಮನೆಗೆ ಕಳುಹಿಸುವುದು ನ್ಯಾಯವೇ?" ಅಂತ ಕೇಳಿದ!

* * *

"ಬುದ್ಧಿ!....ನಿಮ್ಮನ್ನ ದೊಡ್ಡ ಸಾಹೇಬರು ಕರೆಯುತ್ತಾರೆ."

"ನನ್ನನ್ನೇ ಬರಹೇಳಿದರೇನೋ? ಇಂಥಾವರು ಅಂತ ಹೆಸರು ಹೇಳಲಿಲ್ಲವೇನೋ?"

"ಹೆಸರು ಹೇಳಿಲ್ಲ, 'ಮೂರು ಹೊತ್ತೂ ಗೊರಕೆ ಹೊಡೆಯುತ್ತಾರಲ್ಲಾ, ಆ ಸೋಮಾರೀನ ಕರೆದುಕೊಂಡು ಬಾ', ಅಂದರು ಬುದ್ಧಿ."



# ಗಾಯನ ಕೂಟ

ನೊನ್ನೆ ಒಂದು ಸಂಗೀತ ಕಛೇರಿ. ಇದ್ದಿದ್ದರಲ್ಲಿ ಭಾರೀ ಕಛೇರಿ ಎಂದೇ ಹೇಳಬೇಕು. ಇಡೀ ಕರ್ಣಾಟಕೀಯ ಸಂಗೀತಗಾರರಲ್ಲಿ ಹೆಸರಾದವರು ಹಾಡುತ್ತಾರೆಂದಮೇಲೆ, ಕೇವಲ ಬಾಲಕನೊಬ್ಬನು ಅಸಾಧಾರಣ ಪಾಂಡಿತ್ಯವನ್ನು ಮೃದುವಾದ ಮೃದಂಗದಮೇಲೆ ತೋರಿಸುತ್ತಾನೆಂದಮೇಲೆ ಜನಸಂದಣಿ ಕೇಳಬೇಕೆ ? ನೂಕುನುಗ್ಗಲು ಎಂದರೆ ನಿಮುಗರ್ಥವಾಗುತ್ತೆ. ಭೂರಿದಕ್ಷಿಣೆ ಕೊಟ್ಟಾಗಲೂ ಬ್ರಾಹ್ಮಣರ ಸಂದಣಿ ಅಷ್ಟಿರುವುದಿಲ್ಲ ಅನ್ನಿ.

ನಾವು ಹೋಗುವ ಹೊತ್ತಿಗೆ ಕಛೇರಿ ಆರಂಭವಾಗಿಹೋಗಿತ್ತು. ಹೊಸ ಮಾದರಿ ಕಛೇರಿ. ಎಲ್ಲರಿಗೂ ಕುರ್ಚಿಗಳು. ಸಂಗೀತಗಾರರ ಸಮೂಹವು ರಂಗಸ್ಥಳದಮೇಲೆ, ಸೀನರಿ ಮುಂದುಗಡೆ ಕುಳಿತಿದ್ದರು. ನಾವು ಬಾಗಿಲ ಬಳಿ ಇದ್ದಾಗಲೇ ಪ ಪ ಪ ಪ್ಪ ಪ್ಪ ಎಂದು ಶುರುಮಾಡಿದ್ದರು, ಮಾಡಿಸುತ್ತಲೂ ಇದ್ದರು, ಅವರವರ ಆಯುಧಗಳ ಕೈಬಾಯಲ್ಲಿ.

ಹೊತ್ತಾಗಿ ಹೋದುದರಿಂದ ತಲೆ ಬಗ್ಗಿಸಿಕೊಂಡೇ ಹೊರಟೆವು ಖಾಲೀಭಾಗವನ್ನು ನೋಡಲಿಕ್ಕೆಂದು ಆಜೂಬಾಜೂ, ಸಾಯಂಕಾಲ ಷಹರಿನಲ್ಲಿ ಬೂಟ್ಸು ಮಾರುವವನಂತೆ ಕೆದ್ದುನೋಡುತ್ತಾ ಹೋದೆವು. ಆಗ ನೋಡಿ ನನ್ನ ಕಣ್ಣಿಗೆ ಒಂದು ಘಟಸರ್ಪವು ಕಾಣಬಂತು. ಅಯ್ಯೋ! ಇಷ್ಟು ಜನರಿರುವ ಸ್ಥಳ, ಇನು ಬಂದರೆ ಇನ್ನೇನು ಗತಿ ಎಂದು ಚೆನ್ನಾಗಿ ನೋಡಿದೆ. ನಾಗರಹಾವಿನಂತೆಯೇ ಇದ್ದ ಸೀರೆ. ಈ ನಾಗರಹಾವಿನ ಒಡಲನ್ನು ನೋಡಿದ ನಾನು ಹೆಡೆಯ ಕಡೆ ನೋಡಿದೆ. ಖಂಡಿತವಾಗಿಯೂ ಹೆಡೆಯೆತ್ತಿದ ನಾಗವೇಣಿ. ಬುಸುಗುಟ್ಟುವುದೊಂದೇ ಬಾಕಿ. ವಿಳಂಬವಾಗಿ ಹೋಗಿ ಈಕೆಯ ಶ್ರಾವ್ಯ ಸಂಗೀತಕ್ಕೆ ಅಡ್ಡಬಂದೆವೆಂದೋ ಏನೋ ದುರುಗುಟ್ಟಿಕೊಂಡು ನೋಡಿದಳು. ತಲೆ ತಗ್ಗಿಸಿಕೊಂಡು ಮುಂದೆ ಹೋದೆವು.

ಪೋಲೀಸಿನವರು ಖೈದಿಗಳಿಗೆ ಬಳೆ ತೊಡಿಸುವುದು ನೋಡಿಲ್ಲವೇ ! ಅದೇ ತರಹ ಬಳೆಗಳು ಕಾಣಬಂತು. ಯಾರಿರಬಹುದು, ಯಾರೋ ದೇಶಭಕ್ತರಿರಬೇಕು ಎಂದು ಆ ಕಡೆಗೇ ನೋಡಿದೆ. ಗಾಜಿನ ಬಳೆಗಳು, ಅವುಗಳ ದಾರ್ಢ್ಯ, ರೂಪು ಎಲ್ಲವೂ ಪೋಲೀಸರ ಬಳೆಗಳಂತೆಯೇ, ಬಳಾಧಾರಿಗಳನ್ನು ನೋಡಿದೆ. ಕಾಮಾಕ್ಷಿ – ಅಸ್ವರ್ಥನಾಮ – ಇನ್ನು ಇಲ್ಲಿದ್ದರೆ ಅಪಾಯವೆಂದು ಮುಂದುವರೆದೆ.

ಕರ್ಣಕುಂಡಲ. ಜೋತುಬಿದ್ದ ಕರ್ಣಕುಂಡಲ ಕಿವಿಯಿಂದ ಭುಜದವರೆಗೂ ಇಳಿಬಿದ್ದ ಆಭರಣ. ಈ ಭಾರವನ್ನು ತಡೆಯಬಹುದಾದ ಕಿವಿಯ ಸಾಮರ್ಥ್ಯವೆಷ್ಟಿರಬಹುದು ! ಇಂತಹ ಕಿವಿಗೆ ಬಿದ್ದ ಸುದ್ದಿ ಉಳಿದುಕೊಂಡಿರಲು ಸಾಧ್ಯವೇ ? ಈ ಕಿವಿಯಾಭರಣಗಳನ್ನು ಹೊತ್ತ ಸಾಹಸಿನಿಯ ಮುಖ ನೋಡೋಣವೆಂದು ಆಪಕ್ಕ ತಿರುಗಿ ಈಪಕ್ಕ ಸಾಗಿ ಕಡೆಗೂ ಸಾಧಿಸಿದೆ. ಐವತ್ತು ವರ್ಷದ ಪ್ರಾಯದವಳ್ಳೇ ಅನಾಥೆಯಾದಂತಹ ಕಳೆ.

ಬಡನುತ್ತೈದೆಗೆ ಇಜ್ಜೋಡಿ ಜಡೆ. ಮುಖದ ಮೇಲೆಲ್ಲಾ ಶೈವರಂತೆ ವಿಭೂತಿ ಬಳಿದು ಅಳಿಸಿದ ಸೂಚನೆ. ತೊಂಡೆಯ ಹಣ್ಣಿನ ರಂಗನ್ನು ಹಚ್ಚಿದ ಅಧರಗಳು. ಮುಖ್ಯ-ಸೋಗುಹೋಗುತ್ತಿದ್ದ ವಯಸ್ಸನ್ನು ಕೈ ಎತ್ತಿ ಹಿಡಿದು ಬಣ್ಣ ಬಳಿದು ಹಿಂತಿರುಗಿ ಕರೆಯುವಂತೆ ಭಾಸವಾಗುತ್ತಿತ್ತು. ವಂಕಿ ಮುರು ಧರಿಸುವ ಬದಲು ಈ ಮೋರೆಗೆ ಕರ್ಣಕುಂಡಲವೇಕೆ? ಎಂದಂದುಕೊಂಡೆ. ಮುಂದಕ್ಕೆ ಸಾಗಿದೆ.

ಅಲ್ಲಿ ಖಾಲಿಯಾದ ಜಾಗವೊಂದು ಸಿಕ್ಕಿತು. ಅಲ್ಲಿಯೇ ಕುಳಿತೆ. ಸಂಗೀತ ಕೇಳಲುಪಕ್ರಮ.

ನನಗೆ ಅಷ್ಟಾಗಿ ರಾಗಜ್ಞಾನವಿಲ್ಲ. ಹಾಡುವವರು ಯಾವುದಾದರೂ ಹಾಡಿದರೆ, ನನಗೆ ತಿಳಿದ ಹಾಡುಗಳನ್ನು ಅವುಗಳಿಗೆ ಸರಿಹೋಗಿಸಲೆತ್ನಿಸುತ್ತೇನೆ. ಉದಾಹರಣೆಗೆ-ಜಯಜಯ ಗೋಕುಲಬಾಲ, ಇದರಂತೆಯೇ ಇದ್ದರೆ ಭೈರವಿ, ಮಾತಾಡಬಾರದೇನೋ ಎಂದ ಹಾಗಿದ್ದರೆ ಕಮಾಚು, ಎಎಎ ಯೇ ಎಂಬಂತಿದ್ದರೆ ಭೈರವಿ. ಹೀಗೆಯೇನೆ. ಆದಿನ ನೋಡಿ ಸಂಗೀತಗಾರರು ಹಾಡಿದ ಎಲ್ಲಾ ರಾಗಗಳಿಗೂ, ಜಯಜಯ ಗೋಕುಲ ಬಾಲ ಸರಿಹೋಯಿತು. ಅಂದಮೇಲೆ ನನ್ನ ಮನಸ್ಸಿನಲ್ಲಿ ಇವತ್ತು ಭೈರವಿ ಹಬ್ಬ ಬರೀ ಅದೇ ರಾಗ ಹಾಡುತ್ತಿದ್ದಾರೆ ಎಂದು. ಪಕ್ಕದವರು ಮಾತ್ರ 'ಆಹಾ ಎನ್ನ ಸಾಹಿತ್ಯ. ಕುಂತುವರಾಳಿ ಇಷ್ಟಡಿ ಕೇಟದ್ದೇ ಇಲ್ಲೆ' ಈ ರೀತಿ ಟೀಕೆ ಮಾಡುತ್ತಿದ್ದರು. ನನಗೊಂದೂ ಅರ್ಥವಾಗಲಿಲ್ಲ ಅನ್ನಿ.

ಅಂತೂ ಇಂತೂ ಮಂಗಳವಾಯಿತು. ಸೌರಾಷ್ಟ್ರ ಎಂದೆ. ಇದನ್ನಾರೂ ಎದುರಿಸುವುದಿಲ್ಲ ಎಂದುಕೊಂಡು ಪಕ್ಕದಲ್ಲಿದ್ದವರಿಗೆ 'ಇಷ್ಟಡಿ ಸೌರಾಷ್ಟ್ರತ್ತೇ ಕೇಟುದೇ ಇಲ್ಲೈ' ಎಂದೆ. ಇದು 'ಸೌರಾಷ್ಟ್ರ ಅಲ್ಲೇ ಸ್ವಾರ್-ಮಧ್ಯಮಾವತಿ' ಎಂದರು.

ತಿರುಗಿ ತಲೆ ತಗ್ಗಿಸಿಕೊಂಡು ಹಿಂತಿರುಗಿ ಬಂದೆ. ನಾಗರಹಾವಂತಿರುವುದನ್ನು ಕಂಡರೆ ಶುಭಶಕುನ ಎನ್ನುತ್ತಾರೆ. ಖಂಡಿತವಾಗಿಯೂ ಅಲ್ಲ-ಅನುಭವದಿಂದ ಹೇಳುತ್ತೇನೆ.



# ಜಡೆ ಹುಚ್ಚು

ಮಲ್ಲಿಗೆ ಮೊನ್ನೆ ಜಡೆಯನು ಹೆಣೆದರು!
ಮಲ್ಲಿಗೆ ಹೂವನು ಚಂದದಿ ಮುಡಿದರು!
ಹುಡುಗಿಯ ನಿಲುವು; ಸರಿಗೆಯ ಸೆರಗು,
ನಡಿಗೆಯ ಬೆಡಗು; ಹಣೆಯೊಳು ಸಾದು.
ಮಲ್ಲಿ! ಬಾರೆ! ಜಡೆಯನು ತೋರೆ!
ಎಲ್ಲಿ! ಎತ್ತ! ಎಂತಹ ಸೊಬಗು!
ಎಂದರು ಜನರು ಕರೆದು ಕರೆದು.
ಬಂದರು ನಿಂತರು ನೋಡುತ ನಲಿದರು.

* * *

ಮಲ್ಲಿಗೆ ಮಾತ್ರ ಕೊರಗು, ಕಂಬನಿ,
ಮಲ್ಲಿಗೆ ವಾಸನೆ ಬಂದರೆ ಸಾಲದು.
ಇಂತಹ ಸೊಬಗಿನ ಜಡೆಯನು ತೆಗೆದು
ಹಿಂದಕೆ ನೂಕುವುದೇನನ್ಯಾಯ?
ಎನ್ನುತ ಮಲ್ಲಿ ಒಬ್ಬಳೆ ಕುಳಿತು
ತನ್ನಯ ಮೆದುಳನು ಕದಡಿಸಿ ಕಡೆದಳು.
ಛಟ್ಟನೆ ಮುಖವನು ಹಿಂದಕೆ ತಿರುಗಿಸಿ
ಫಟ್ಟನೆ ಜಡೆಯನು ಮುಂದಕೆ ತರಲು
ತಿರುಗ ಮುರುಗ ಸುತ್ತುತ ತಿರುಗಿ
ನಿಂತಳು! ಹಿಂದಕೆ ಜಡೆಯೂ ಬಂತು.

* * *

ಆದರು ಹುಡುಗಿ ಮನಸೋಲದೆಯೇ
ವೇಗದಿ ತಿರುಗುತ ತಿರುಗ ಮುರುಗ
ನಿಂತರೆ ಮತ್ತೆ, ಜಡೆಯೂ ನಿಂತಿತು
ಅಂತರವೇನೂ ಬರಲೇ ಇಲ್ಲ!
ಮಲ್ಲಿ ಪಾಪ ಬಲಗಡೆ ಎಡಗಡೆ
ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ
ತಿರುಗಿ ತಿರುಗಿ ತಿರುಗಿ ತಿರುಗಿ
ನಿಂತರೆ, ಹಾಳು ಜಡೆಯದು ಮಾತ್ರ
ನಿಂತಿತು; ಮಲ್ಲಿಗೆ ಸಿಟ್ಟೇ ಬಂತು!

* * *

ಹುಡುಗಿಗೆ ಹುಚ್ಚೇ ಹಿಡಿಯಿತು ಕೊನೆಗೆ!
ನಡೆವರೆ ಫಟ್ಟನೆ ತಿರುಗುವಳಿನ್ನೂ
ಜಡೆಯನು ಮುಂದಕೆ ಮುಖವನು ಹಿಂದಕೆ
ಕಡೆಗೂ ತಂದೇ ತರುವೆನು ಎನ್ನುತ
ಕಟಕಟ ಹಲ್ಲನು ಕಡಿವಳು ಮಲ್ಲಿ!

— (ಥಾಕ್ಕರೆ ಕೃತ ಕವನಾನುವಾದ).

# ಅರಶಿನ-ಕುಂಕುಮ

ಶ್ರೀ ಲೀಲಾವತಿ

"ಕೂತುಕೊಳ್ಳಿ, ಜಾನಕಮ್ಮನವರೇ! ಎದ್ದುಬಿಟ್ಟಿರಲ್ಲಾ! ಏನು ಮಾಡುವುದು? ತೆಂಗಿನಕಾಯಿ ತೆಗೆದುಕೊಂಡು ಬಾ ಅಂದರೆ ಎರಡಾಣೆ ಅಂತಾನೆ ಜವಾನ. ಆರತಿ ಎತ್ತಬೇಕು ಅಂತ ಕೂಸಿನ ಹಠ. ಎತ್ತಬಾರದು ಅಂತ ಅವರದು ಬೇರೆ ಮೊಂಡಾಟ. ಅವರ ಗೋಳು ಅವರಿಗೆ....ಅವರ ಸಂಬಳದಲ್ಲಿ ತಿಂಗಳು ತಿಂಗಳಿಗೂ ಕಟಾಯಿಸುತ್ತಾರಂತೆ...."

"ಕೋರ್ಟಿನವರೇನು?" ಅಂದರು ಜಾನಕಮ್ಮನವರು, ಇದೇ ಸಮಯ ಅಂತ.

"ಚೆನ್ನಾಯಿತು. ಸಾಲಾನೂ ಸೋಲಾನೂ ಅಲ್ಲ, ಜಾನಕಮ್ಮನವರೇ! ಯುದ್ಧ ನಡೆಯುತ್ತಾ ಇದೆಯಲ್ಲಾ, ಅಲ್ಲಿಗೆ ಕಳುಹಿಸುತ್ತಾರಂತೆ ಇವರೂನೂ, ಎರಡು ನೋಟನ್ನ...." ಅಂದರು ಲಕ್ಷ್ಮಮ್ಮನವರು, ಜಾನಕಮ್ಮನವರ ಕೈಗೆ ಕೋಸುಂಬರಿ ದೊನ್ನೇನೂ ಎಲೆ ಅಡಿಕೇನೂ ಇಟ್ಟು, ಅವರೆದುರು ಕುಂಕುಮದ ಭರಣಿ ಹಿಡಿಯುತ್ತಾ.

"ಹಾಗಾದರೆ ನಾನು ಬರಲೇ" ಅಂತ ಉಪಚಾರ ನುಡಿಯುತ್ತಾ ಜಾನಕಮ್ಮನವರು ಏಳುವುದೇ ತಡ, ಕಿಟ್ಟೋ ಅಂತ ಕಿರಿಚುತ್ತಾ ರಾಜಮ್ಮನವರ ಹೆಣ್ಣು ಕೂಸು ಒಳಗೆ ನುಗ್ಗಿತು. ಅದರ ಜೊತೆಗೆ ಅದರ ತಾಯೀನೂ ಬಂದರು. ಅಂದರೆ, ರಾಜಮ್ಮನವರೇ ಕೂಸನ್ನು ಕೊಂಕುಳಲ್ಲಿರಿಸಿ ಅದರ ಕಣ್ಣೊರಸಿ ಅದರ ತುಟಿಗೆ ನಿಪ್ಪಲ್ಲನ್ನು ತುರುಕುತ್ತಿದ್ದರು, ಅಷ್ಟೆ....ಸರಿ! ಇನ್ನು ಅವರು ಜಾನಕಮ್ಮನವರನ್ನು ಬಿಟ್ಟಾರೆಯೇ? ಎರಡು ನಿಮಿಷಗಳಲ್ಲೇ ದೊಡ್ಡದೊಂದು ಚರ್ಚೆ ಪ್ರಾರಂಭವಾಯಿತು. ಅರಶಿನ ಕುಂಕುಮಕ್ಕೆ ಅಂತ ಬಂದವರು ಅವೆರಡನ್ನೂ ಕಳೆದುಕೊಂಡ ಅತ್ತೆಯವರ ಯೋಗಕ್ಷೇಮ ಸಾಧನೆಗೆ ಉಪಾಯ ಹುಡುಕಿದರು. ಲಕ್ಷ್ಮಮ್ಮನವರೂ ಆಗಾಗ ಬಾಯಿಹಾಕಿದರು.

"ಯಾರಾದರೂ ಅನ್ನ ಬಟ್ಟೆ ಹಾಕಿ ನೋಡಿಕೊಳ್ಳುವುದಾಗಿದ್ದರೆ, ತಿಂಗಳಿಗಿಷ್ಟು ಅಂತ ಕೊಟ್ಟರೂ ಪರವಾಗಿಲ್ಲ, ನಮ್ಮತ್ತೇನ ಕಳುಹಿಸಿಬಿಡುವುದಕ್ಕೆ ನಾನು ಸಿದ್ಧ....ಅವರ ಮಗನನ್ನೂ ಒಪ್ಪಿಸಬಹುದು" ಅಂದರು ರಾಜಮ್ಮನವರು. "ಅನಾಥಾಲಯ ಅಂತ ಮಾಡಿದಾರೆ ಹುಡುಗರಿಗೆ! ಅಶಕ್ತಪೋಷಕ ಅಂತ ಮಾಡಿದಾರೆ ತಿರುಪೆಯವರಿಗೆ! ಪಿಂಜರಾಪೋಲ್ ಅಂತ ಮಾಡಿದಾರೆ ಮುದಿ ಹಸುಗಳಿಗೆ. ಮೂರು ಹೊತ್ತೂ ಸೊಸೆಯರನ್ನ ಕಿತ್ತು ತಿನ್ನುವ ಮುದಿಗೂಬೆಗಳಿಗೆ ಅಂಥಾದ್ದೇನಾದರೂ ಮಾಡಿದರೆ...." ಎಂದು ಗೊಣಗಿದರು ಜಾನಕಮ್ಮನವರು, ಬೀದಿಕಡೆ ನೋಡುತ್ತಾ. ಆಗ ಲಕ್ಷ್ಮಮ್ಮನವರು, "ಹೇಳಿ ಜಾನಕಮ್ಮನವರೇ! ಹೆದರಬೇಡಿ! ಅಲ್ಲಿ ಯಾರೂ ಇಲ್ಲ, ನಾನು ಕರೆದವರೆಲ್ಲರೂ ಬಂದುಹೋಗಾಯ್ತು. ನೀವಿಬ್ಬರೇ ಉಳಿದದ್ದು" ಎಂದರು. "ಈ ಊರಲ್ಲಿ ಏನಿಲ್ಲಾ ಅಂದ್ರೂ ನೂರು ಅತ್ತೆಗಳು ಸಿಕ್ಕುತ್ತಾರೆ, ಅಂಥಾವರು" ಎಂದು ರಾಜಮ್ಮನವರು ಅಂದಾಗ, ಲಕ್ಷ್ಮಮ್ಮನವರಿಗೆ ಸಹಿಸಲಿಲ್ಲ. "ನೂರೇ! ಸಾವಿರಕ್ಕೇನು ಕಡಿಮೆ ಇಲ್ಲಿ" ಅಂತ ಅಂದೇಬಿಟ್ಟರು. "ಲಕ್ಷ್ಮಮ್ಮನವರೇ! ಸಾವಿರವಲ್ಲ, ಹತ್ತುಸಾವಿರ ಇರ

ಬಹುದು. ಮನೆಗೊಂದು ಮುದಿಗೊರಡು ಇದ್ದೇ ಇರುತ್ತದೆ. ಆದರೆ, ನಾನು ಹೇಳಿದ್ದು ತಿಂಗಳಿಗೆ ಎಂಟೋ ಹತ್ತೋ ತೆರಲು ಯೋಗ್ಯತೆ ಇರುವ ಮಕ್ಕಳ ತಾಯಂದಿರು" ಅಂದಾಗ ಅವರೂ ಹೂಂ ಅನ್ನಬೇಕಾಯಿತು. ಆದರೆ, ರಾಜಮ್ಮನವರು ಕೆರಳಿದರು. "ಇಲ್ಲಿ! ಕೇಳಿ ಅಂದ್ರೆ! ಎಂಟೋ ಹತ್ತೋ ಯಾಕೆ? ತಿಂಗಳಿಗೆ ಎರಡೇಕಾದಶಿ, ಇನ್ನೂ ಅದೆಷ್ಟೋ ವ್ರತಗಳು, ಒಪ್ಪತ್ತು ಊಟ, ಕಾಫಿ ಟೀ ಕೂಡಲೇ ಕೂಡದು, ಈರುಳ್ಳಿ ಆಲೂಗಡ್ಡೆ ವರ್ಜ್ಯ, ತಣ್ಣೀರು ಸ್ನಾನ....ನಾಲ್ಕು ರೂಪಾಯಿದ್ದರೆ ರಾಜಾರೋಷವಾಗಿರಬಹುದು, ಆಳುಕಾಳು ಬೇಕಿಲ್ಲ" ಅಂತ ವ್ಯಾಖ್ಯಾನ ಮಾಡಿದರು. "ಯಾವನಾದರೂ ವೈದ್ಯನಿಗೆ ಹೇಳಿ ಒಂದಿಷ್ಟು ಕಷಾಯ ಆಗಾಗ ಕುಡಿಸಿದರೆ ಒಳ್ಳೆಯದು" ಅಂದರು ಜಾನಕಮ್ಮನವರು, ಕೋಸುಂಬರಿಯನ್ನು ಅಗಿಯುತ್ತಾ. "ಬೆಕ್ಕಿನ ಕುತ್ತಿಗೆಗೆ ಗಂಟೆ ಕಟ್ಟಬೇಕು ಅಂತ ಇಲಿಗಳು ಯೋಚಿಸಿದ ಹಾಗಾಯಿತು ಇದು. ಯಾರು ಇದನ್ನ ಜಾರಿಗೆ ತರುವುದು? ಯಾವ ಅತ್ತೆ ನೊದಲು ಹೊರಡುತ್ತಾರೆ ಅಲ್ಲಿಗೆ" ಎಂದು ರಾಜಮ್ಮನವರು ರಾಗ ಎಳೆದರು. "ಊರಿಗೊಂದು ಸಮಾಜ, ಬೀದಿಗೊಂದು ಸದನ, ಬೆಳೆಯುತ್ತಾ ಇದೆಯಲ್ಲಾ! ಅದಕ್ಕೆಲ್ಲ ಚಂದಾ ಕೊಡುವವರು ಸೊಸೆಯರೇ ಜಾಸ್ತಿ! ಮುಂದಿನ ಕಾನ್ಫರೆನ್ಸಿನಲ್ಲಿ ಠರಾವ್ ತರೋಣ: ಮಂತ್ರಿಪದವಿ ಸಿಕ್ಕುವುದಕ್ಕಿಂತ ನಮ್ಮ ನಮ್ಮ ಮನೆಗಳಲ್ಲಿ ನಾವೇ ಸ್ವರಾಜ್ಯ ಸಂಪಾದಿಸೋಣ. ಅವರ ಜುಟ್ಟಂತೂ ನಮ್ಮ ಕೈಯಲ್ಲಿದೆ; ಈ ಅತ್ತೆಯರನ್ನೂ ಕೂಡ ಜುಟ್ಟುಹಿಡಿದು...." ಎಂದು ಜಾನಕಮ್ಮನವರು ಹೇಳುತ್ತಿದ್ದರೆ, ಉಪನ್ಯಾಸದ ಧೋರಣೆಗೆ ಬೆರಗಾಗಿ ಅವರಿಬ್ಬರೂ ನಕ್ಕುಬಿಟ್ಟರು. "ಅದು ಸರಿ! ಅತ್ತೆಯವರನ್ನು ದಬ್ಬುವುದು ಹೇಗೆ? ಅದೇ ದೊಡ್ಡ ಕಷ್ಟ" ಅಂತ ರಾಜಮ್ಮನವರು ಮೂಗೆಳೆದಾಗ ಅದನ್ನು ಕೂಡಲೇ ಲಕ್ಷ್ಮಮ್ಮನವರು ಸರಿಪಡಿಸಿಬಿಟ್ಟರು. "ಅಯ್ಯೋ ಬಿಡಿ! ರಾಜಮ್ಮನವರೇ! ನಾವು ನಾಲ್ಕು ದಿನ ಬಾಯಿ ಬೀಸಿಕೊಂಡು ಮನೆಯೊಳಗೆ ಓಡಾಡಿದರೆ, ಅವರು ತಾವಾಗಿಯೇ ಗಂಟುಕಟ್ಟುತ್ತಾರೆ" ಅಂದರು. "ಅಲ್ಲದೆ, ಇನ್ನೊಂದುಪಾಯ ಮಾಡೋಣ. ಕಾಶೀಲೋ, ರಾಮೇಶ್ವರದಲ್ಲೋ, ತಿರುಪತೀಲೋ ಈ ಅತ್ತೆ ಸತ್ರವನ್ನ ಕಟ್ಟಿಬಿಡುವುದು. ಅಲ್ಲಿಗೆ ಹೋದರೆ ಪುಣ್ಯ ಬರುತ್ತದೆ, ತೀರ್ಥ ಸ್ನಾನ ದೇವರ ದರ್ಶನ ಅಂದರೆ, ಅರ್ಧ ಅತ್ತೆಯರು ಹೊರಟೇಬಿಡುತ್ತಾರೆ. ಅಷ್ಟಕ್ಕೂ ಜಗ್ಗದೆಹೋದರೆ, ಕಾನೂನು ಮಾಡಿಸುವುದು" ಅಂದರು ಜಾನಕಮ್ಮನವರು. "ಆದರೆ, ಒಂದು ವಿಷಯ!" ಅಂತ ಹೇಳುತ್ತಾ, ರಾಜಮ್ಮನವರೂ ಎದ್ದರು. ತೆಂಗಿನಕಾಯಿ ಸಿಗದೆ ಇದ್ದದ್ದರಲ್ಲಿ ಅವರಿಗೂ ಕೊಂಚ ಮನಸ್ತಾಪವೇ! "ನಮ್ಮ ಮನೆಗಳಿಗೆ ಸೊಸೆಗಳು ಬರುವುದರೊಳಗೆ ಆ ಕಾನೂನನ್ನು ರದ್ದು ಮಾಡಿಸಿಬಿಡಬೇಕು" ಅಂದರು. ಜಾನಕಮ್ಮನವರ ಬಾಯಿತುಂಬ ಕೋಸುಂಬರಿ. ಅದ್ದರಿಂದ ಅವರು ಏನೂ ಮಾತಾಡಲಿಲ್ಲ.



# ಸ್ವಾತಂತ್ರ್ಯ ಪದಗೊಳು

( ಶ್ರೀ 'ರತ್ನ'ರ ಕ್ಷಮೆ ಬೇಡಿ )

ಜಾತಿ, ಇಂಗ್ಲೀಸ್, ಸ್ವಾತಂತ್ರ್ಯಪದಗೊಳ್
ಅಂದ್ರ ಭಾರ್ತೀಗ್* ಪ್ರಾಣ!
ಪ್ರೊಯಿಟ್ರೆ ಎತ್ತಿ ಓದ್ಬುಟ್ಟಾಂದ್ರೆ -
ತಕ್ಕೊ! ಪದಗೊಳ್ ಬಾಣ!

ಚರ್ಚಿಲ್ ಏನ್ರ ಇಂಡ್ಯಾಕ್ ಇಳದು
ನನ್ ತಾಕ್ ಬಂದಾಂತ್ ಅನ್ನು;
ಕೀಟ್ಲೆ-ಪಾಟ್ಲೆ ಮಾಡ್ತನ್ ಔನು -
ಭಾರ್ತಿಮೇಲ್ ಔನ್ ಕಣ್ಣು!

'ಜಾತಿ ಭೇದಗೊಳ್ ಬುಟ್‌ಬುಡ್ ಭಾರ್ತಿ'
ಅಂತ್ ಔನ್ ಏನಾರ್ ಅಂದ್ರೆ -
ಮೂಗ್ ಮೂರ್ ಚೂರಾಗ್ ಮುರಸ್ಕೊಂತೀನಿ
ಚರ್ಚಿಲ್‌ನಾತ್ಗ ಅಡ್ಬಂದ್ರೆ!

'ಜಾತಿ ಬುಟ್ಟಿ, ಇಂಗ್ಲೀಸ್ ಬುಟ್‌ಬುಡ್!'
ಅಂತ್ ಔನ್ ಏನಾರ್ ಅಂದ್ರೆ
ಕೇಳ್ದೋಯ್ತು ಅಂತ ಕುಣದಾಡ್ತಿನಿ
ದೊಡ್ಡ್ ಒಂದ್‌ಕಾಟ! ತೊಂದ್ರೆ!

'ಸ್ವಾತಂತ್ರ್ಯಪದಗೊಳ್ ಆಡೋದ್ನೆಲ್ಲ
ನಿಲ್ಲಿಸ್ ಬುಡಬೇಕ್ ಭಾರ್ತಿ!'
ಅಂತ್ ಔನ್ ಅಂದ್ರೆ - ಚರ್ಚಿಲ್ ಆದ್ರೆ ಏನು
ಮಾಡ್ತೀನ್ ಮೋಕ್‌ಮಂಗ್ಳಾರ್ತಿ!

ಆಗ್ನೆಮಾಡೋ ಅಂಗ್ಲೇರ್ ಎಲ್ಲಾ
ಕ್ರಿಪ್ಸೆ ಆಗ್ಲಿ - ಎಲ್ಲ!
ಸ್ವಾತಂತ್ರ್ಯಸುದ್ದೀಗ್ ಏನ್ರಬಂದ್ರೆ
ಮಾನಾ ಉಳಸಾಕಿಲ್ಲ!

* ಭಾರತಿಗೆ

## ಸ್ವಾತಂತ್ರ್ಯ ಪದಗೊಳ್

ನರಕಕ್ಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ-
ಮೂಗ್ನಲ್ ಸ್ವಾತಂತ್ರ್ಯಪದವಾಡ್ತೀನಿ
ನನ್ನ್ ಮನಸನ್ನ್ ನೀಕಾಣೆ!

ಭೇದ ಓಗ್ಲಿ! ಇಂಗ್ಲೀಸ್ ಓಗ್ಲಿ!
ಎಲ್ಲಾ ಕೊಚ್ಕೊಂಡ್ ಓಗ್ಲಿ!
ಪರ್ಮೆಂಚ್ ಇರೋತನಕ ಮುಂದೆ
ಸ್ವಾತಂತ್ರ್ಯಪದ್ಗೋಳ್ ಸುಗ್ಲಿ!

—"ಶಾಂತಿಗ್ರಾಂ," ಬೆಂಗಳೂರು.

[ ಶ್ರೀ ಜಿ. ಪಿ. ರಾಜರತ್ನಂರ 'ಕನ್ನಡ ಪದಗೊಳ್' ಎಂಬ ಕವಿತೆಯ ಅಣಕವಾಡು ]

---

## ರೇಷನಿಂಗ್ ಗಾದೆಗಳು

ಅಕ್ಕಿ ಮೇಲೆ ಆಶೆ—ಭಂಟರ ಮೇಲೆ ಪ್ರೀತಿ.

* * *

ಒಪ್ಪತ್ತುಂಡವ ಯೋಗಿ—ಎರಡು ಹೊತ್ತುಂಡವ ಭೋಗಿ—ಮೂರು ಹೊತ್ತುಂಡವನನ್ನು ಪೋಲೀಸಿನವರು ಹೊತ್ತುಕೊಂಡು ಹೋಗಿ.

* * *

ಸಕ್ಕರೆ ಇದ್ದವ ಸೋದರಮಾವ—ಚಿಲ್ಲರೆ ಕೊಟ್ಟವ ಚಿಕ್ಕಪ್ಪ.

* * *

ಸಾವಿರ ಕುದುರೆ ಸರದಾರನಿಗಿಂತ, ಸೊಸೈಟಿ ಗುಮಾಸ್ತೇ ಮೇಲು.

* * *

ಈ ತಿಂಗಳ ಗೀತಾವಾಕ್ಯ—ಮೊದಲೇ ಕೊಳ್ಳದವರು—
"ಶಂಖಂ ದಧ್ಮೌ ಪರಿತಾಪವಾನ್".

* * *

ಅಕ್ಕಿ ಕೇಳಲಿಕ್ಕೆ ಆತನ ಹತ್ತಿರ ಹೋದರೆ ಆತ ಊಟ ಬಿಟ್ಟು ಆರು ದಿನಗಳಾಯ್ತು.

* * *

ರಾಯಗೆ ರಾಜ್ಯ ದೊರೆತರೂ ಬೀಸುಕ್ಕೆ ರಾಗಿ ಸಿಗದು.

* * *

ಯತ್ರ ತಂಡುಲಃ ಕಷ್ಟ - ಯತ್ರ ಪುತ್ರೋ ಅಳುರ್ಧರಃ,
ತತ್ರ ನೌಕರಃ ಲಭ್ಯಂ - ಲಂಚಂ, ಕಾಂಚನಂ, ಮಿತ್ಯಥಾ.

* * *

ರಾತ್ರಿ ಕಂಡ ರೇಷನಿಂಗ್ ಆಫೀಸಿನಲ್ಲಿ, ಹಗಲು ಹೆಬ್ಬಾಗಿಲು ನೋಡಲೂ ಕಷ್ಟ.

# ಸಂಜೆಯ ಕಳ್ಳ

ಮೊನ್ನೆ ಸಾಯಂಕಾಲ ಆರು ಆರೂವರೆ ಗಂಟೆ ಹೊತ್ತಿನಲ್ಲಿ ಪೇಟೆಗೆ ಹೋಗಿದ್ದೆ. ನನ್ನ ಕೆಲಸವು ಮುಗಿದಮೇಲೆ ಬಸ್ ನಿಲ್ದಾಣಕ್ಕೆ ಬಂದು ಬಸ್ಸಿಗಾಗಿ ಕಾಯುತ್ತಿದ್ದೆ. ಬಸ್ಸು ಬಂತು. ನೂಕು ನುಗ್ಗಲು, ಹಾಗೂ ಹೀಗೂ ಪ್ರಯಾಸ ಮಾಡಿ ಬಸ್ಸಿನಲ್ಲಿ ನುಗ್ಗಿ ಕುಳಿತೆ. ಮನೆಗೂ ಬಂದು ಸೇರಿದೆ. ಊಟವಾದ ಮೇಲೆ ಬರೆಯುವುದಕ್ಕೆಂದು ಪೆನ್ ತೆಗೆದುಕೊಳ್ಳಲು ಜೇಬಿಗೆ ಕೈಹಾಕಿದೆ. ಪೆನ್ನಿಲ್ಲ. ಬಸ್ ನಿಲ್ದಾಣಕ್ಕೆ ಬರುವ ಮುಂಚೆ ಪೆನ್ ಜೇಬಿನಲ್ಲಿತ್ತು. ಮನೆಗೆ ಬಂದಾಗ ಇಲ್ಲ. ಬಸ್ಸಿನಲ್ಲಿ ಕಳುವಾಗುವ ಸಂಭವವಿರಲಿಲ್ಲ. ಅಂದಮೇಲೆ ಬಸ್ ಹತ್ತುವಾಗಲೇ ಕಳ್ಳತನವಾಗಿದ್ದಿರಬೇಕು. ಹೊಸಾ ಹೊಸ ಪೆನ್ನು ಹತ್ತು ರೂಪಾಯಿ ಕೊಟ್ಟು ಕೊಂಡಿದ್ದು. ಒಂದು ತಿಂಗಳಲ್ಲೇ ಹೀಗೆ ಕಳುವಾದುದು ಬಹಳ ದುಃಖಕರವಾಗಿತ್ತು. ಆದರೂ ಕಳ್ಳನ ಚಾಲೂಕಿಗೆ ತಲೆದೂಗಲೇ ಬೇಕಾಗಿತ್ತು. ನಾಳೆಯಿಂದ ಸಾಯಂಕಾಲದ ಹೊತ್ತು ಬಸ್ ನಿಲ್ದಾಣದ ಬಳಿ ನಿಂತು ಈ ಕಳ್ಳನ ಪತ್ತೆ ಹಚ್ಚಬೇಕು ಎಂದು ನಿರ್ಧರಿಸಿಕೊಂಡೆ. ಈ ಕೆಲಸಕ್ಕೆ ನೆರವಾಗಲು ನನ್ನ ಸ್ನೇಹಿತ ಗುಂಡುವನ್ನು ಕರೆಯೋಣವೆಂದು ಮಾರನೇದಿನ ಗುಂಡುವನ್ನು ಭೆಟ್ಟಿಯಾಗಿ ಅವನಿಗೆ ಆಮೂಲಾಗ್ರವಾಗಿ ಹೇಳಿದೆ. ಅವನೂ ಹೋದವಾರ ಒಳಜೇಬಿನಲ್ಲಿದ್ದ ಹಣದ ಚೀಲವನ್ನು ಕಳೆದುಕೊಂಡಿದ್ದನಂತೆ. ಚೀಲದಲ್ಲಿ ಹಣವಿತ್ತಿಲ್ಲವಾದರೂ, ಕಳುವಿನ ನೀತಿಯು ರೀತಿಯು ಅವನನ್ನು ಕವಡಿತ್ತಂತೆ. ನನ್ನಿಂದ ಸೂಚನೆ ಬಂದಾಗ ನೆರವಾಗಲು ಸಿದ್ಧನಾದ.

ಮಾರನೆಯ ದಿನದಿಂದ ಖಾಲಿಜೇಬಾಂಗಿಗಳಾಗಿ ನಾವಿಬ್ಬರೂ ಬಸ್ ನಿಲ್ದಾಣದ ಹತ್ತಿರ ಕಾಯಲು ಆರಂಭಿಸಿದೆವು. ಅಲ್ಲಿ ಸುಳಿದಾಡುತ್ತಿದ್ದವರ ಮೇಲೆಲ್ಲಾ ಕಣ್ಣು. ಮೊದಲು ಮೊದಲು ಮಾಸಲು ಬಟ್ಟೆಯವರ ಮೇಲೆ ಕಣ್ಣು. ಆಮೇಲೆ ಹುಡುಗರ ಮೇಲೆ ಕಣ್ಣು. ನಂತರ ಚೆನ್ನಾಗಿ ಉಡುಪು ಧರಿಸಿದ ಯುವಕರ ಮೇಲೆ ಕಣ್ಣು. ಸ್ತ್ರೀಯರೆಂದು ನಾವು ಯಾರನ್ನೂ ಅಲಕ್ಷಿಸಲಿಲ್ಲ. ಹೀಗೆ ಮೂರು ಸಾಯಂಕಾಲದ ಸರ್ಪಕಾವಲು ಹಾಕಿದ ಮೇಲೆ, ಶನಿವಾರ ಸಾಯಂಕಾಲ ಒಬ್ಬ ಕಳ್ಳ ಸಿಕ್ಕಿದ. ಹದಿನಾರು ವರ್ಷದ ಯುವಕ. ಚೂಟಿಯಾದ ಹುಡುಗ. ಲಕ್ಷಣವಾದ ಅಂಗಿ ಷರಾಯಿ ಧರಿಸಿದ್ದಾನೆ. ಬಸ್ ಹತ್ತುವ ಗಲಾಟೆ ಶುರುವಾಯಿತು. ಬಸ್ ಹತ್ತುತ್ತಿದ್ದವರೊಬ್ಬರಮೇಲೆ ಬಿದ್ದಂತೆ ಮಾಡಿದ. 'ಅಹ ಮದ್ ಆಜಾವ್' ಎಂದು ಬ್ರಾಹ್ಮಣಉರ್ದು ಭಾಷೆಯಲ್ಲಿ ಕೂಗಿಕೊಂಡು ಮುಖವನ್ನು ಈಕಡೆ ತಿರುಗಿಸಿದ. ಆವೇಳೆಗೆ ಅವನ ಕೈಗಳು ಎದುರಾಳಿಯ ಜೇಬಿನಿಂದ ಪೆನ್ನನ್ನು ಹಾರಿಸಿತ್ತು. ಹಾರಿಸಿದ ಕೂಡಲೆ "ಅಹ ಮದ್ ಆಜಾವ್" ಎಂಬ ಧ್ವನಿಗೆ ಪ್ರತಿಧ್ವನಿ ಕೊಟ್ಟ. ಎಂಟು ವರ್ಷದ ಹುಡುಗನು ಇವನ ಪಕ್ಕದಲ್ಲೇ ಇದ್ದ, ಈ ಹುಡುಗನ ಕೈಯಲ್ಲಿ ಪೆನ್ ಕಾಣಬಂತು. ಹುಡುಗನು ಮಿಂಚಿನಂತೆ ಹತ್ತಿರಿದ್ದ ಸಂದಿಗೆ ನುಗ್ಗಿದ. ಅವನ ಹಿಂದೆ ನಾವಿಬ್ಬರೂ ನುಗ್ಗಿದೆವು. ಹತ್ತುಗಜ ಹೋಗುವುದರಲ್ಲೇ

ಅವನನ್ನು ಹಿಡಿದೆವು. ಅವನನ್ನೂ ಹಿಡಿದು ಕೊಂಡು ಬಸ್ ನಿಲ್ದಾಣದ ಹತ್ತಿರಕ್ಕೆ ಬಂದೆವು. ಆವೇಳೆಗೆ ಬಸ್ ಹೊರಟು ಹೋಗಿತ್ತು. ಹದಿನಾರು ವರ್ಷದ ಕಳ್ಳ ಯುವಕನೂ ಹೊರಟುಹೋಗಿದ್ದನು. ನಮಗೆ ಪೋಲೀಸಿನವರಲ್ಲಿ ದೂರುಹೇಳಲು ಮನಸ್ಸಿಲ್ಲ. ದೂರುಹೇಳಲು ಹೋದವರು ಕಳ್ಳನಿಗಿಂತ ಹೆಚ್ಚಾಗಿ ಶಿಕ್ಷೆ ಅನುಭವಿಸ ಬೇಕು. ಹೇಗೆನ್ನುತ್ತೀರೊ. ಇವತ್ತು ದೂರು ಹೇಳಿದರೆ ಮಾರನೆಯ ದಿನದಿಂದ ದಿನಾಗಲೂ, ದಿನಬಿಟ್ಟು ದಿನ, ಪೋಲೀಸ್ ಠಾಣೆಗೆ ಅಲೆಯಬೇಕು. ಅಲ್ಲಿನ ನೌಕರರಿಗೆಲ್ಲಾ ಸಲಾಮುಹಾಕಿ ಅವರ ಸಮಯ ಕಾದು, ಅವರಪ್ಪಣೆ ಪಡೆದು ಹಿಂತಿರುಗ ಬೇಕು, ನಂತರ ನ್ಯಾಯಾಸ್ಥಾನಕ್ಕೆ ಅಲೆಯಲು ಆರಂಭ. ಅಲ್ಲಿಯೂ ವಾರಮಾಡಿಕ್ಕೊಂಡಂತೆ ಶನಿವಾರ ಬುಧವಾರ ಎಂದು ವಿಚಾರಣೆಯು ಮುಂದು ಹಾಕಿದಂತೆಲ್ಲಾ ನಾವೂ ಅಲೆದಾಡಬೇಕು. ವಿಚಾರಣೆಗೆ ಆರಂಭವಾಯಿತೆಂದರೆ, ಅಪರಾಧಿಯ ಲಾಯರು ನಮ್ಮನ್ನೇ ಖೈದಿಯಂತೆ ಭಾವಿಸಿ ಪ್ರಶ್ನೆಮಾಡುವುದನ್ನೆಲ್ಲಾ ಅನುಭವಿಸಬೇಕು. ಹೀಗಾಗಿ ಈ ಶಿಕ್ಷೆ ನಾವು ಅನುಭವಿಸುವುದಕ್ಕಿಂತ ಅಪರಾಧಿಯನ್ನು ಬಿಟ್ಟುಬಿಡುವುದು ಒಳ್ಳೆಯದೆಂದು ಅನ್ನಿಸುವುದು ನ್ಯಾಯವಲ್ಲವೇ.

ಈ ಕಾರಣಗಳಿಂದ ನಾವು ಪೋಲೀಸ್ ಠಾಣೆಗೆ ಹೋಗಲಿಲ್ಲ. ಆ ಹುಡುಗನನ್ನೂ ಪೆನ್ನನ್ನೂ ಹಿಡಿದುಕೊಂಡು ಪಾರ್ಕಿಗೆ ಹೋದೆವು. ಅಲ್ಲಿ ಅವನನ್ನು ಹೆದರಿಸಿ ಬೆದರಿಸಿ ಅವನು ಹೇಗೆ ಕಳ್ಳತನಕ್ಕೆ ಸಹಾಯ ಮಾಡುತ್ತಿದ್ದ ಎಂದು ವಿಚಾರಿಸಿದೆವು. ಕದ್ದ ಪೆನ್ನುಗಳನ್ನು ಎಲ್ಲಿ ವಿಲೇವಾರಿ ಮಾಡುತ್ತಿದ್ದ ಎಂದು ಕೇಳಿದೆವು.

ಹುಡುಗನು ಹೇಳಿದನು: ಯಾರಾದರೂ ಅವನ ಸಹಾಯಕರು 'ಅಹಮದ್ ಆಜಾದ್' ಎಂಬ ಸಂಕೇತ ಗುರುತಿಟ್ಟುಕೊಂಡು ಕೂಗಿದಾಗ ತಾನು ಕೂಗುಬಂದ ಸ್ಥಳಕ್ಕೆ ಓಡುವನೆಂದೂ, ಅಲ್ಲಿ ಯಾರು ಇವನ ಕೈಗೆ ಯಾವ ಸಾಮಾನುಕೊಟ್ಟರೂ ಅದನ್ನೂ ನೋಡದೆ ಅದನ್ನು ತೆಗೆದುಕೊಂಡು ಹತ್ತಿರಿನ ಸಂದಿಗೆ ಓಡುವನೆಂದೂ ಅಲ್ಲಿಂದ ಮೆಲ್ಲಗೆ ಮಾರ್ಕೆಟ್ಟಿನ ಬಳಿಗೆ ಸಾಗುವನೆಂದೂ, ಅಲ್ಲಿ ಇವನ ಧಣಿಯೊಬ್ಬನಿರುವನೆಂದೂ, ಆತನಿಗೆ ಈ ಮಾಲನ್ನು ತಲುಪಿಸಿದ ಕೂಡಲೆ ಆತನು ಇವನಿಗೆ ಎರಡಾಣೆ ಕೊಡುವನೆಂದೂ, ಒಂದೊಂದು ದಿನ ಇವನು ಒಂದು ರೂಪಾಯಿ ಕೂಡ ಸಂಪಾದಿಸಿದ್ದನೆಂದೂ ಎಲ್ಲ ಕತೆಯನ್ನೂ ಹೇಳಿದ.

ನಿಮ್ಮ ಧಣಿಯು ಯಾರು, ಆತನು ಈ ಪೆನ್ನುಗಳನ್ನೆಲ್ಲಾ ಯಾರಿಗೆ ಮಾರುತ್ತಾನೆ, ಹೇಗೆ ಮಾರುತ್ತಾನೆ ಎಂದು ನಾವು ಕೇಳಿದ್ದಕ್ಕೆ ಆ ಹುಡುಗನು ಮುಂದುವರಿಸಿದನು. "ನನಗೆ ಹಣ ಕೊಡುವವನು ಧಣಿಯಲ್ಲ. ಅವನು ನೌಕರ. ನಾನು ಅವನ ಹಿಂದೆಯೇ ಸುತ್ತಾಡಿ ಅವನ ಧಣಿ ಯಾರೆಂಬುದನ್ನು ಪತ್ತೆಹಚ್ಚಿದೆ. ಅವನ ಹೆಸರನ್ನು ನಾನು ಹೇಳಿದೆನೆಂದು ಅವನಿಗೆ ಗೊತ್ತಾದರೆ ನನ್ನನ್ನು ಹುಟ್ಟಿಲ್ಲ ಎನ್ನಿಸುತ್ತಾನೆ, ಅದಕ್ಕಾಗಿ ಹೇಳಲು ಹೆದರುತ್ತೇನೆ.

ಈಗ ಹೇಳದಿದ್ದರೆ ನೀನು ಹುಟ್ಟಲಿಲ್ಲ ಎಂದು ನಾವೇ ಅನ್ನಿಸುತ್ತೇವೆ ಎಂದು ಹೆದರಿಸಲು, ಅವನು ನನಗೆ ಚೆನ್ನಾಗಿ ಗೊತ್ತಿಲ್ಲ. ಆದರೆ ಆತನೇ ಶ್ರೀ........ ರಾಯರು ಎಂದು ಅನುಮಾನ ಎಂದನು.

ಒಬ್ಬರ ಮುಖ ಒಬ್ಬರು ನೋಡಿಕೊಂಡೆವು. ಆ ಹುಡುಗನನ್ನು ಹೆದರಿಸಿ ಇನ್ನು ಮುಂದೆ ಹೀಗೆ ಮಾಡಬೇಡ ಎಂದು ಹೇಳಿ ಬಿಟ್ಟುಬಿಟ್ಟೆವು.

ಶ್ರೀ........ರಾಯರು ಯಾರು ಗೊತ್ತೆ?

ನಾವಿಬ್ಬರೂ ನೌಕರರಾಗಿರುವ ಅಂಗಡಿಯ ಮಾಲೀಕರು. ಅತ್ಯಂತ ಧನಿಕರು, ಉನ್ನತ ವ್ಯಾಪಾರಿಗಳು, ಬಿರುದಾಂಕಿತರು.

---

# ಚೋಳ ಕುವರರು

ಏಳು ಮಕ್ಕಳಿದ್ದರು ಚೋಳರಾಯನಿಗೆ.
ಒಬ್ಬ ತಂದೆಯ ಕಂದಗಳು.

ನೀರಿನ ಮೂಡಲಲಿ ಮೊರೆದು ತೀಡುತಲಿ
ಗಾಳಿ ಕಡಲನು ತರುಬುವೆಡೆಗೆ
ಮೊದಲ ಮೂವರು ಹೋಗಿ ಸೇರಿದರು
ಹಡಗಿನಲ್ಲಿನ ಕೆಲಸಗಳಿಗೆ.

ನೌಕರಿಯ ಮಾಡಲೋಸುಗ
[illegible] ಸಿದ್ಧವಾಗುವ
ಸ್ವಸ್ಥಳದಲಿ ಸೇರಿಕೊಂಡರು
ಮಿಕ್ಕ ಮೂವರು ಮಕ್ಕಳು.

ಕಡೆಯವನೊಬ್ಬನೆ ಮನೆಯಲಿದ್ದನು.
ತಾಯಿತಂದೆಯ ನೆರವಿಗಾಗಿ
ತಂದೆ ಕಸುಬನು ಅವನು ಕೊಂಡನು.
ತಂದೆಯಂತೇ ಬ್ರಹ್ಮಚಾರಿ.

●

# ಗುಡಿಗೆ ದೀಪ ಹಾಕಿಸಿದ್ದು

ರಾಜೀವಪುರದಲ್ಲಿ ಕಣಿವೆ ಕೆಳಗಿನವರು ವಲಸೆ ಬಂದು ನೆಲಸಿದ್ದರು. ರಾಜೀವ ಪುರದ ಅರ್ಧ ಜನರೆಲ್ಲಾ ಈ ರೀತಿ ವಲಸೆ ಬಂದವರೇ ಆಗಿದ್ದರು. ಇವರುಗಳ ಇಹ ಪರದ ಸೌಖ್ಯ ನೋಡಿಕೊಳ್ಳಲೋಸುಗ ಅವರ ಕಡೆಯ ಪುರೋಹಿತರೊಬ್ಬರು ಬಂದು ರಾಜೀವಪುರದಲ್ಲೇ ನೆಲಸಿದ್ದರು. ಈ ವಾದ್ಯಾರು ಚೆನ್ನಾಗಿ ವೇದಾಧ್ಯಯನ ಮಾಡಿ ದವರು, ಸಕಲ ಶಾಸ್ತ್ರ ಪಾರಂಗತರು. ಮೇಲಾಗಿ ಜನರ ಮನಸ್ಸನ್ನು ತಿಳಿದವರು. ಜನರನ್ನು ಹೊಂದಿಕೊಂಡು ಅವರ ಮನೆಗಳ ಪೌರೋಹಿತ್ಯವನ್ನು ನಡೆಸುತ್ತಾ ಅವರ ಕಷ್ಟಸುಖಗಳಲ್ಲಿ ಭಾಗಿಯಾಗಿದ್ದುಕೊಂಡು ಅವರೆಲ್ಲರ ಪ್ರೀತ್ಯಾದರಣೆಗಳಿಗೆ ಪಾತ್ರ ರಾಗಿದ್ದರು.

ಈ ವರ್ಷ ಸಂಕ್ರಾಂತಿ ಹಬ್ಬ. ತಮಿಳಿನವರಿಗೆಲ್ಲಾ ಪೊಂಗಲ್ ಹಬ್ಬ. ವೈಭವದ ಹಬ್ಬ. ಹಬ್ಬದ ದಿನ ವಾದ್ಯಾರು ತಮಿಳಿನವರ ಮನೆಗೆಲ್ಲಾ ಹೋಗಿ ಶುಭಾಶಯಗಳನ್ನು ಕೋರಿ ಎಳ್ಳು ಬೆಲ್ಲಗಳನ್ನು ತೆಗೆದುಕೊಂಡು ಬರುವ ವಾಡಿಕೆ. ಸಾಯಂಕಾಲ ತಾವು ಅರ್ಚಕರಾಗಿದ್ದ ಪುಳ್ಳೆಯಾರ್ ದೇವಸ್ಥಾನದಲ್ಲಿ ಎಲ್ಲರನ್ನೂ ಬರಮಾಡಿಕೊಂಡು ಪುಳ್ಳೆ ಯಾರ್ ಪೂಜೆಮಾಡಿ ನಂತರ ಅರ್ಧ ಗಂಟೆಯ ಕಾಲ ಯಾವುದಾದರೂ ವೇದಾಂತ ವಿಚಾರ ಉಪನ್ಯಾಸ ಮಾಡುವುದೂ ವಾಡಿಕೆಯಾಗಿತ್ತು. ಅದರಂತೆಯೇ ಈ ವರ್ಷವೂ ಉಪನ್ಯಾಸಕ್ಕೆ ಆರಂಭವಾಯಿತು.

ಈ ಸಾರಿ ವೇದಾಂತದ ವಿಚಾರ ಯಾವುದೂ ಹೇಳಲ್ಪಡಲಿಲ್ಲ. ಅದರ ಬದಲು ಈಗ ಒದಗಿರುವ ಸಂಗ್ರಾಮ, ಆ ಕಾರಣ ಒದಗಿರುವ ಕಷ್ಟ ಕ್ಷಾಮಗಳು. ಇನ್ನು ಮುಂದೆ ಎಂದಾದರೂ ಶಾಂತಿಯುಂಟೇ ಆಗುವ ಸಂಭವವಿದೆಯೆಂದೂ, ಅದು ಬೇಗನೆ ಲಭಿಸುವುದೆಂದೂ, ಆ ಶಾಂತಿ ಬಂದ ಕಾಲಕ್ಕೆ ರಾಜೀವಪುರವು ಶಾಂತಿಯನ್ನು ಸರಿಯಾದ ರೀತಿಯಲ್ಲಿ ಸಾಮೂಹಿಕ ಹಬ್ಬದಂತೆ ಆಚರಿಸಬೇಕೆಂದೂ ಅದಕ್ಕಾಗಿ ತಾವು ಸಲಹೆ ಗಳನ್ನು ಕೇಳುವರೆಂದೂ ತಮ್ಮ ಭಾಷಣದಲ್ಲಿ ತಿಳಿಸಿದರು.

ತ್ಯಾಗಮಾರ್ಗಯ್ಯರು, ಪ್ರಸಿದ್ಧ ಚೌಬೀನೆ ವ್ಯಾಪಾರಿಗಳು - ಅವರೆಂದರು ಸಾಮೂ ಹಿಕ ಹಬ್ಬವನ್ನು ಆಚರಿಸುವ ಬದಲು ದೇವಸ್ಥಾನಕ್ಕೆ ಒಂದು ರಥವನ್ನು ತಯಾರಿಸಿ ಶಾಂತಿಯಾಚರಣೆಯ ದಿನ ದೇವರನ್ನು ರಥದ ಮೇಲೆ ಕುಳ್ಳಿರಿಸಿ ಊರು ಮೆರವಣಿಗೆ ಮಾಡಿಸಬೇಕೆಂದು. ದೇವರಿಗೆ ರಥವಿಲ್ಲದ್ದು ಊರಿನವರ ಕೀರ್ತಿಗೆ, ದೇವಮಾರ್ಗಕ್ಕೆ ಕಳಂಕವೆಂದರು. ಹಾಗೂ ತಾವು ರಥವನ್ನು ಬಹಳ ಸುಲಭ ದರಕ್ಕೆ ಮಾಡಿಸಿಕೊಡು ವುದಾಗಿ ವಾಗ್ದಾನಮಾಡಿದರು. ಚಂದಾ ಎತ್ತುವ ಕೆಲಸಕ್ಕೆ ಸಹಾಯಮಾಡುವುದಾಗಿ ಹೇಳಿದರು.

ಶ್ರೀ ಗೌರೀಗಣೇಶಯ್ಯರು ರಥೋತ್ಸವ ವರ್ಷಕ್ಕೆ ಒಂದು ದಿನ ಮಾಡಬೇಕು. ಅದಕ್ಕಾಗಿ ಹಣವನ್ನು ಖರ್ಚುಮಾಡಿಸುವ ಬದಲು ಅದೇ ಹಣದಿಂದ ಶಾಂತಿ ಆರಾಧನೆ

ಯನ್ನು ಹರಿಕಥಾ ಸಪ್ತಾಹದಿಂದ ಆಚರಿಸಬೇಕೆಂದರು. ಪ್ರಸಿದ್ಧ ಭಾಗವತರಾದ ಶ್ರೀಯುತ ವೇದಮಾರ್ಗ ಪ್ರವರ್ತಕ ದಾಸಯ್ಯಭಾಗವತರನ್ನು ತಾವು ಕರೆಸಿಕೊಡುವುದಾಗಿ ವಾಗ್ದಾನಮಾಡಿದರು. ಭಾಗವತರು ಅತಿ ಸ್ವಲ್ಪ ಹಣಕ್ಕೇ ಸಪ್ತಾಹವನ್ನು ನೆರವೇರಿಸುವಂತೆ ತಾವು ಒಪ್ಪಿಸುವುದಾಗಿ ಭರವಸೆ ಇತ್ತರು.

ಶ್ರೀಯುತ ಆಸ್ತಿಶಾಸ್ತ್ರಿಯಂಗಾರ್ಯರು ಹರಿಕಥೆ ಸಪ್ತಾಹವು ಅಷ್ಟೇನೂ ಸ್ಥಿರವಾದುದಲ್ಲವೆಂದೂ, ಈ ವಾರ ಕೇಳಿ ಮುಂದಿನ ವಾರ ಮರೆತುಬಿಡುವಂತಾಗುವುದೆಂದೂ, ಇಡೀ ಲೋಕದ ಶಾಂತಿಸ್ಥಾಪನೆಯನ್ನು ಈ ರೀತಿ ಚರರೀತಿಯಲ್ಲಿ ಆಚರಿಸುವುದಕ್ಕಿಂತ ಸ್ಥಿರರೀತಿಯಲ್ಲಿ ವರ್ಷಂಪ್ರತಿ ಆಚರಿಸುವಂತೆ ಏರ್ಪಾಡು ಮಾಡುವುದು ಒಳ್ಳೆಯದೆಂದರು. ಚಂದಾಹಣವನ್ನು ವಸೂಲ್ಮಾಡಿ ಅದರಿಂದ ಒಂದೆರಡು ಎಕರೆ ಜಮೀನನ್ನು ದೇವಸ್ಥಾನಕ್ಕೆ ಕೊಂಡು ಅದರಿಂದ ಬಂದ ಭತ್ತದಿಂದ ವರ್ಷಂಪ್ರತಿಯೂ ಧಾತ್ರೀಹವನವನ್ನು ಶಾಂತಿ ಆರಾಧನೆಯ ಹೆಸರಿನಲ್ಲಿ ನಡೆಸಬೇಕೆಂದು ಸೂಚಿಸಿದರು. ತಮ್ಮ ಗದ್ದೆಯಲ್ಲಿನ ಫಲವತ್ತಾದ ಎರಡು ಎಕರೆ ಜಮೀನನ್ನು ಸುಲಭ ಕ್ರಯಕ್ಕೆ ಮಾರುವುದಾಗಿ ಹೇಳಿದರು.

ಕಂಟ್ರಾಕ್ಟರು ಸರಿಶಾಮೈಯ್ಯರು ಇವೆಲ್ಲಕ್ಕೂ ಬಹಳ ಹಣ ಚಂದಾ ಒದಗಿಸಬೇಕು. ಈ ಕಷ್ಟಕಾಲದಲ್ಲಿ ಅಷ್ಟು ಹಣ ಶೇಖರಿಸುವುದು ಅಷ್ಟೇನೂ ಸುಲಭವಲ್ಲ. ಒಂದು ರಥಕ್ಕಾಗಲೀ, ಹರಿಕಥಾ ಸಪ್ತಾಹಕ್ಕಾಗಲೀ, ಎರಡೆಕರೆ ಜಮೀನಿಗಾಗಲೀ, ಎಷ್ಟೇ ಇಲ್ಲ ಎಂದರೂ ಸುಮಾರು ಎರಡು ಸಾವಿರ ರೂಪಾಯಾದರೂ ಖರ್ಚಾಗುವುದೆಂದೂ ಅಷ್ಟು ವೆಚ್ಚಮಾಡುವ ಬದಲು, ಇರುವ ದೇವಸ್ಥಾನವನ್ನೇ ಜೀರ್ಣೋದ್ಧಾರ ಮಾಡಿ, ಸುಣ್ಣಬಣ್ಣ ಮಾಡಿಸುವುದು ಒಳ್ಳೆಯದೆಂದರು. ತಾವೇ ಉಸ್ತುವಾರಿ ವಹಿಸಿಕೊಂಡು ಆ ಕೆಲಸವನ್ನು ಬಹಳ ಸುಲಭ ರೀತಿಯಲ್ಲಿ ನಡೆಸಿಕೊಡುವುದಾಗಿ ವಾಗ್ದಾನ ಕೊಟ್ಟರು. ಅಲ್ಲದೆ ಗೋಪುರವನ್ನು ಸರಿಪಡಿಸಿಕೊಡುವುದಾಗಿಯೂ ಭರವಸೆ ಇತ್ತರು.

ಎಲ್ಲವನ್ನೂ ದಾಸ್ಯಾರು ಸಾವಧಾನವಾಗಿ ಕೇಳಿದರು, ನಂತರ ಹೇಳಿದರು. ನೀವುಗಳೆಲ್ಲರೂ ಇಷ್ಟು ಮುತುವರ್ಜಿಯಿಂದ ಮುಂದೆನಿಂತು ಸಹಾಯ ಮಾಡುವುದಾಗಿ ಹೇಳಿದ್ದೀರಿ. ಇವುಗಳೆಲ್ಲದರಿಂದೂ ನಿಮ್ಮೆಲ್ಲರಿಗೂ ಶಾಂತಿ ಆರಾಧನೆಯನ್ನು ಯಥಾಶಕ್ತಿ ಚೆನ್ನಾಗಿಯೇ ನಡೆಸಬೇಕೆಂದು ಮನಸ್ಸಿನಲ್ಲಿರುವುದು ಖಂಡಿತವಾಗಿ ತಿಳಿಯಬರುತ್ತದೆ. ರಥನಿರ್ಮಾಣವು ಬಹಳ ಖರ್ಚಿನದು, ಹರಿಕಥಾ ಸಪ್ತಾಹವು ಅಸ್ಥಿರ, ಜಮೀನು ಕೊಂಡು ವರ್ಷಂಪ್ರತಿಯೂ ಭೋಜನದ ಏರ್ಪಾಡು ಮಾಡುವುದು ಅಷ್ಟು ಸುಲಭವಲ್ಲ. ಅಲ್ಲದೆ ಎರಡು ಎಕರೆ ಜಮೀನು ಸಾಲದು, ಶ್ರೀ ಆಸ್ತಿಶಾಸ್ತ್ರಿಯಂಗಾರ್ಯರು ಎರಡೆಕರೆ ಜಮೀನನ್ನು ಮಾತ್ರ ಮಾರಬಲ್ಲರು, ಅದೊಂದೇ ರೈತಾಬಾದಿಗೆ ಅನುಕೂಲವಿಲ್ಲದಿರುವುದು. ದೇವಸ್ಥಾನದ ಜೀರ್ಣೋದ್ಧಾರವು ಅಷ್ಟೇ ಜರೂರು ಬೇಕಾಗಿಲ್ಲ. ಅಷ್ಟೇನೂ ಶಿಥಿಲವಾಗಿಲ್ಲ. ನನ್ನದೊಂದು ವಿನಯ ಸೂಚನೆ. ಶಾಂತಿಪ್ರಸರಣೆಯು ಪ್ರಾಜ್ವಲ್ಯಮಾನವಾದುದು. ಲೋಕಕ್ಕೆಲ್ಲಾ ಬೆಳಕು ಹರಡಿಸುವಂತಹುದು. ನಮ್ಮ ದೇವಸ್ಥಾನಕ್ಕೆ ಈ ನವೀನ ನಾಗರಿಕ ಕಾಲದಲ್ಲಿ ಕೂಡ ವಿದ್ಯುಚ್ಛಕ್ತಿಯ ಬೆಳಕಿಲ್ಲ. ಶಾಂತಿ ಆರಾಧನೆಯನ್ನು ಈ ಬೆಳಕು ಹಾಕಿಸುವುದರಿಂದ ಚೆನ್ನಾಗಿ ಆಚರಿಸಿದಂತಾಗುವುದು. ತಾವೆಲ್ಲರೂ

ಒಪ್ಪಿ, ಚಂದಾ ಇತ್ತು ಸಹಾಯ ಮಾಡಿದರೆ ಇನ್ನೆರಡು ವಾರಗಳಲ್ಲೇ ದೇವಸ್ಥಾನವನ್ನು ಪ್ರಾಜ್ವಲ್ಯಮಾನಗೊಳಿಸಬಹುದು. ವರ್ಷವೆಲ್ಲಾ ಉಪಯೋಗವೂ ಆಗುತ್ತದೆ ಎಂದರು.

ಎಲ್ಲರೂ ಸರ್ವಾನುಮತದಿಂದ ಒಪ್ಪಿದರು. ಸಾಕಷ್ಟು ಹಣವೂ ಚಂದಾಮೂಲಕ ಆ ದಿನವೇ ಉತ್ಪನ್ನವಾಯಿತು. ಇನ್ನೆರಡು ವಾರಗಳಲ್ಲಿ ದೀಪ ಬರುವುದೂ ಖಂಡಿತ ವಾಯಿತು.

ಎಲ್ಲರಿಗೂ ಆಗ ತಿಳಿಯದೆ ಇದ್ದ ಸಮಾಚಾರ ಒಂದು ನನಗೆ ಗೊತ್ತಿತ್ತು. ವಾದ್ಯಾರ ಮಗಳ ಮದುವೆ ಇನ್ನು ನಾಲ್ಕು ವಾರಗಳಲ್ಲಿ, ದೇವಸ್ಥಾನದ ಅಂಗಳದಲ್ಲಿ ನಿಷ್ಕರ್ಷೆಯಾಗಿತ್ತು.

---



“ನಿಜವಾಗಿ, ಸ್ವಾಮಿ, ಮೂರು ದಿವಸದಿಂದ ಅದನ್ನೇ ಹುಡುಕುತ್ತಿದ್ದೇನೆ! ಎಲ್ಲೂ ಸಿಗೋಲ್ಲ.”

# ಬೊಗಳದಿದ್ದ ಬುಲ್ಡಾಗ್

ಅತಿಥಿಗಳೆಲ್ಲಾ ಒಬ್ಬೊಬ್ಬರಾಗಿ ಮನೆಗೆ ದಯಮಾಡಿಸಿದ ಮೇಲೆ ನಾವು ಅರ್ಧ ಆಗಿದ ಎಲೆ ಅಡಿಕೆಯನ್ನು ಪೂರಯಿಸುತ್ತಾ ಚಾಪೆಯ ಮೇಲೆ ಕಾಲು ಚಾಚಿದ್ದೆವು; ನಾನು, ನಮ್ಮಣ್ಣ, ಭಾವ, ಚಿಕ್ಕಪ್ಪ, ಇನ್ನಿಬ್ಬರು ಮೂವರು (Also ran) ಬೆಳಗಿನಿಂದ ಸರಪಳಿಗೆ ತೂಗು ಬಿದ್ದಿದ್ದ ನಮ್ಮ ಮನೆ ನಾಯಿಗೆ ಆಗತಾನೆ ಬಂಧವಿಮೋಚನೆಯಾಗಿದ್ದದ್ದರಿಂದ ಅದು ನಮ್ಮೆಲ್ಲರ ನಡುವೆ ನೆಗೆದಾಡುತ್ತ ರಂಪು ಮಾಡುತ್ತಿತ್ತು.

ಭಾವ "ಅನಿಷ್ಟ, ಈ ನಾಯಿಗಳ್ನ ಸಾಕೋದೂ ಸಾಕು...." ಅಂದರು.

ನಾನು "ಇದು ಜಾತಿ ನಾಯಿರೀ. ಬುಲ್ಡಾಗು" ಅಂದೆ.

ಚಿಕ್ಕಪ್ಪ "ಬೊಗಳೋ ಬುಲ್ಡಾಗೋ?" ಅಂದರು.

ಒಬ್ಬ Also ran "ನಮ್ಮನೇಲಿ ಒಂದು ಬುಲ್ಡಾಗ್ ಇತ್ತು...." ಅನ್ನುವಷ್ಟರಲ್ಲಿ, ಚಿಕ್ಕಪ್ಪ ಬಿಟ್ಟುಕೊಡುತ್ತಾರೆಯೆ?....

"ಬೊಗಳೋ ಬುಲ್ಡಾಗನ್ನ ನಂಬಿದರೂ...."

"ನಮ್ಮನೇಲಿ ಒಂದು ಬುಲ್ಡಾಗು ಇತ್ತು...."

"ಯಾಕೆ ನಂಬಿದರೂ ಪರವಾಯಿಲ್ಲ ಅಂತೀರೋ? ಬಹಳ ಹಿಂದಿನ ಮಾತು. ನಾವಿನ್ನೂ ಕಾಲೇಜು ಹುಡುಗರು. ನಾನು ತಿಪ್ಪು ಅಪ್ಪಿಷ್ಟ್ರಿ. ನಾನು, ಗುಂಡ, ಮೈಸೂರು ನೋಡೋದಕ್ಕೆ ಅಂತ ಹೋಗಿದ್ದೆವು. ಅಲ್ಲಿ ಒಬ್ಬರ ಮನೇಲಿ ಇಳಿದುಕೊಳ್ಳೋಕೆ ಜಾಗ ಸಿಕ್ಕಿತ್ತು. ಒಂದು ರೂಮನ್ನೇ ಅಲಾಯಿದ ಬಿಟ್ಟುಕೊಟ್ಟಿದ್ದರು. ನಾವು ಆ ರಾತ್ರಿ ಮೆರವಣಿಗೆ, ಗಿರವಣಿಗೆ, ನೋಡಿಕೊಂಡು ವಾಪಸ್ಸು ಬರೋ ಹೊತ್ತಿಗೆ ಮನೇವರೆಲ್ಲ ನಮ್ಮ ರೂಮಿನ ಬಾಗಿಲನ್ನ ನಮಗಾಗಿ ತೆರೆದಿಟ್ಟು ನಿದ್ದೆ ಹೊಡೆದಿದ್ದರು. ನಾವೂ ಸದ್ದಿಲ್ಲದೆ ರೂಮಿನೊಳಕ್ಕೆ ನುಸುಳಿ, ರೂಮಿನ ಬಾಗಿಲು ಚಿಲಕ ಹಾಕಿ ದೀಪ ಹೊತ್ತಿಸಿದೆವು. ರೂಮಿನಲ್ಲಿ ಎರಡು ಹಾಸಿಗೆ ಹಾಸಿಬಿಟ್ಟಿದ್ದರು. ಮಧ್ಯೆ ಒಂದು ಕುರ್ಚಿ. ನಾನು ಕುರ್ಚಿಯ ಮೇಲೆ ಕೂತು ಆರಾಮವಾಗಿ ಬೂಡ್ಸುಗಳನ್ನ ಬಿಚ್ಚಿದೆ. ಗುಂಡ ಗೋಡೆಗೆ ಒರಗಿಕೊಂಡು ನಿಂತು ಬೂಡ್ಸುಗಳನ್ನು ಕಳಚಿದ. ಇಬ್ಬರೂ ಸಂತೋಷವಾಗಿ ಮೆಲ್ಲಗೆ ಸಿಳ್ಳು ಹಾಕುತ್ತ ನಮ್ಮ ದೃಷ್ಟಿಗಳನ್ನ ಹೊರಳಿಸಿ ರೂಮಿನ ಒಂದು ಮೂಲೆಯ ಕಡೆ ಹಾಗೇ ನೋಡಿದೆವು. ಅಲ್ಲಿ ಬೆಚ್ಚಗೆ ಕೂತಿದ್ದ ಒಂದು ಬುಲ್ಡಾಗು ನಮ್ಮ ದೃಷ್ಟಿಗೆ ಬಿದ್ದ ಕೂಡಲೆ ನಮ್ಮ ಸಿಳ್ಳುಗಳು ಸಣ್ಣ ದನಿಗೆ ತಿರುಗಿ ನಿಂತೇ ಹೋದವು."

"ನಮ್ಮನೇಲಿ ಒಂದು ಬುಲ್ಡಾಗು...."

"ಬುಲ್ಡಾಗೂ ನಮ್ಮನ್ನ ನೋಡಿತು. ನೋಡಿ ಎದ್ದು ನಿಂತು ಮೈ ಕೊಡವಿ ನಮಗೂ ಬಾಗಿಲಿಗೂ ಅಡ್ಡವಾಗಿ ಬಂದು ನಿಂತಿತು. ನಾವು ಅದರ ಮೂತಿಯನ್ನ ನೋಡಿದೆವು. ಅದು ನಮ್ಮಿಬ್ಬರ ಮೂತಿಗಳನ್ನೂ ನೋಡಿ ಅಸಮಾಧಾನವನ್ನು ಸೂಚಿಸಿತು. ಮನೆ ಮುಂದಿನ ಮೋರಿಯಲ್ಲಿ ಬಿದ್ದಿರುವ ಕೊಳಕು ಎಂಜಲೆಲೆಗಳನ್ನ ಮನೆ ಯಜಮಾನ ನೋಡುವ

ಹಾಗೆ ಅದು ನಮ್ಮಗಳನ್ನ ಅಸಹ್ಯದಿಂದ ಮೇಲೆ ಕೆಳಗೆ ನೋಡಿತು. ಅವರ ಮುಖವಲ್ಲಿ ಉದಾಸೀನದ ಒಂದು ಎಳೆನಗೆ ಸುಳಿಯಿತು.

"ಅದು ನಕ್ಕು ಸುಮ್ಮನಾಗಿದ್ದಿದ್ದರೆ ನಾವದಕ್ಕೆ ಹೆದರುತ್ತಾ ಇರಲಿಲ್ಲ. ಅದು ನಗುತ್ತ ಒಂದು ಹೆಜ್ಜೆ ಗುಂಡನ ಕಡೆ ಇಟ್ಟಿತು. ಮನಸ್ಸಿನಲ್ಲೇ ಬೈದುಕೊಂಡು ಮೇಲೆ ಮೇಲೆ ನಾವದನ್ನು ನೂರೆಂಟು ಥರವಾಗಿ ಹೊಗಳಿದೆವು. "ಬಹಳ ಒಳ್ಳೇ ನಾಯಿ, ಪಾಪ!" ಅಂದೆವು. "ನನ್ನ ಚಿನ್ನಾ!" ಅಂತ ಕೂಡ ಗುಂಡ ಅಂದುಬಿಟ್ಟ (ಅವನು ಆ ವಿಶೇಷಣವನ್ನ ತನ್ನ ಹೆಂಡತಿಗೆ ಅಂತ ಮಾತ್ರ ಇಟ್ಟಿದ್ದನಂತೆ.) ನಾಯಿಮುಖದಲ್ಲಿ ನಗೆ ಮಾಯವಾಗಿತ್ತು. ಆದೀಗ ತಾನು ಎಂದೋ ನೋಡಿ ಕಲಿತಿದ್ದ ಮುಂಗನ ಹಲ್ಕಿರಿಯನ್ನ ನಮ್ಮೆದುರಿಗೆ ಪ್ರದರ್ಶನ ಮಾಡುತ್ತಿತ್ತು. ಹಲ್ಕಿರಿಯುತ್ತಿದ್ದ ಹಾಗೇ ಅದಕ್ಕೆ ಗುಂಡನ ಬೂಡ್ಸಿಲ್ಲದ ಕಾಲುಗಳಲ್ಲಿ ಏನೋ ಅಭಿಮಾನ ಹುಟ್ಟಿದ ಹಾಗಿತ್ತು. ಅಂತೂ ಬುಲ್ಡಾಗು ಗುಂಡನ ಕಾಲನ್ನು ಮೂಸಿ ನೋಡಲು ಶುರು ಮಾಡಿತ್ತು. ಗುಂಡ ತಾನು ಹೋದ ವರ್ಷ ಹೈಜಂಪಿಗೆ ಸಂಪಾದಿಸಿದ್ದ ಬಹುಮಾನವನ್ನ ನೆನಸಿಕೊಳ್ಳುತ್ತಾ ಮೇಜಿನ ಮೇಲಕ್ಕೆ ಸರಿಯಾಗಿ ಹಾರಿ ಗಪ್ಪನೆ ಕೂತ. ನಾಯಿಗೆ ಯಾರ ಕಾಲಾದರೆ ಏನು? ಅದು ಗುಂಡನನ್ನ ಬಿಟ್ಟು ನನ್ನ ಕಾಲಿಗೆ ಬಂತು. ನಾನು ಮೊದಲು ಕಾಲುಗಳನ್ನ ಮೇಲೆಳೆದುಕೊಂಡು ಅಲ್ಲೇ ಕೂತಿದ್ದೆ. ಆಮೇಲೆ ಕುರ್ಚಿಯ ಮೇಲೆ ಹಾರಿದರೆ ನಾಯಿಗೆ ಪಾಪ, ಏನಾದರೂ ಅಪಾಯವಾದೀತು ಅಂದುಕೊಂಡು, ಯಾವ ಬಹುಮಾನವನ್ನೂ ನೆನೆಸಿಕೊಳ್ಳುವುದಕ್ಕಿಲ್ಲದೆ 'ಅಪ್ಪ ಅಮ್ಮ'ನನ್ನು ನೆನೆಸಿಕೊಂಡು ಗುಂಡನ ಪಕ್ಕಕ್ಕೆ ಹಾರಿದೆ. ನಾಯಿ ತಿರುಗಿ ಮೇಜಿಗೂ ಬಾಗಿಲಿಗೂ ಅಡ್ಡಲಾಗಿ ತನ್ನ ಯಥಾಸ್ಥಾನವನ್ನು ಸೇರಿ ನಿಂತು ನಮ್ಮ ಇಳಿವನ್ನೇ ಕಾಯುತ್ತಿತ್ತು.

"ಒಂಟಿಗಾಲಿನ ಗುಂಡು ಮೇಜಿನ ಮೇಲೆ ನಾವು ಎಂದೂ ಕೂತವರಲ್ಲ. ಅದರಲ್ಲೂ ಅದು ಈ ಕಡೆ ಆ ಕಡೆ ವಾಲದ ಹಾಗೆ ಕಟ್ಟಿ ತೂಕಗಳನ್ನೂ ಸಮಮಾಡಿ ಎಷ್ಟು ಹೊತ್ತು ಕೂತುಕೊಳ್ಳುವುದು ಅಂತ. ನಾಯಿನೋ ಒಂದು ಸಲವಾದರೂ ಬಗುಳಲಿಲ್ಲ. ಬಗುಳಿದ್ದರೆ ಧೈರ್ಯದಿಂದ ಎಷ್ಟು ಹೊತ್ತು ಕೂತಿದ್ದೆವೋ? ಅಂತೂ ರೂಮಿನ ಗಡಿಯಾರ ೨ ಗಂಟೆ ಹೊಡೆಯಿತು ನನ್ನ ಗಡಿಯಾರ ೨-೫ ತೋರಿಸಿತು. ಗುಂಡನ ಗಡಿಯಾರ ೧-೫೨ ತೋರಿಸಿತು. ನನಗೆ ಏನೋ ಹುಚ್ಚು ಸ್ಫೂರ್ತಿ ಬಂದು, ಕೆಳಗೆ ಹಾರಿ, ಟೇಬಲ್ ಕ್ಲಾತನ್ನ ಎಳೆದು ನಾಯಿಯ ತಲೆಯ ಮೇಲೆ ಹಾಕಿ ಇಬ್ಬರು ಒಂದೇ ಉಸಿರಿಗೆ ಬಾಗಿಲು ತೆಗೆದುಕೊಂಡು ಪಲಾಯನ ಕಿತ್ತಿದೆವು.

"ರಾತ್ರಿ ಎಲ್ಲ, ನಿದ್ದೆಯಿಲ್ಲದೆ ಛಳಿಯಲ್ಲಿ ಬೀದಿ ಜಗುಲಿಯ ಮೇಲೆ ಜಾಗರಣೆ ಮಾಡಿದೆವು. ಬೆಳಿಗ್ಗೆ ಒಳಗೆ ಹೋಗಿ ಮನೆ ಯಜಮಾನನಲ್ಲಿ ಸುಖದುಃಖ ಹೇಳಿಕೊಂಡೆವು. ಹೇಳಿದ ಕೂಡಲೆ ಆತ ನಮ್ಮಿಬ್ಬರನ್ನು ಬಾಚಿ ತಬ್ಬಿಕೊಂಡು 'ಶಂಪಗಿರಾ' ಅಂತ ಗೋಳಿಟ್ಟು ಸಂತೈಸುತ್ತಾನೆ ಅಂದುಕೊಂಡೆವು, ನಾವು. ಆದರೆ ಆತ

ಒಂದೇ ಉಸುರಿಗೆ ನಗುತ್ತ ಬಿದ್ದು ಬಿದ್ದು ಹೊರಳಾಡುವುದಕ್ಕೆ ಶುರು ಮಾಡಿದ. ಅರ್ಧ ಗಂಟೆಯ ಮೇಲೆ ನಗು ತಡೆದು ಹೇಳಿದ, 'ಅಯ್ಯೋ, ಅಲ್ಲಾ! ಜಿಮ್ಮೀಗೆ ಹೆದರಿ ಕೂತಿದ್ದಿರಾ! ಜಿಮ್ಮಿ ಪಾಪ, ಅದರ ಬಾಯಲ್ಲಿ ಒಂದು ಹಲ್ಲೂ ಇಲ್ಲ!!.... ಹೊ ಹ್ಹೊ ಹ್ಹೊ....' ಇನ್ನೂ ವಿಧವಿಧವಾಗಿ ನಕ್ಕ. ಅದೆಲ್ಲಾ ನನಗೆ ನೆನಪಿಲ್ಲ. ಅಂತೂ...."

"ನಮ್ಮನೇಲಿ ಒಂದು ಬುಲ್ಡಾಗು...."

ಅವರ ಮನೆ ಬುಲ್ಡಾಗಿನ ವಿಷಯ ನಿದ್ದೆಗಣ್ಣಿನ ನನಗೆ ಬೇಕಿರಲಿಲ್ಲ.

—ಎಸ್. ಎನ್. ಶಿ.

---



"ಒಂದು ಕಾಫಿ ಕುಡಿದು ಹೋಗೋಣಾಂತ ಬಂದನಂತೆ. ಆದರೆ ಚಿಲ್ಲರೆ ಐದು ರೂಪಾಯಿಗೆ ಇರಲಿಲ್ಲವಂತೆ, ಅಯ್ಯರ್ ಹತ್ತಿರ!"

# ಬ್ರಾಹ್ಮಣರಿಗೆ ಮಾತ್ರ

ಶಹರಿನ ಹೋಟಲುಗಳಲ್ಲೂ ಕೂಡ ಈ ಬೋರ್ಡು ಅಲ್ಲಲ್ಲೇ ತೂಗುಹಾಕಲ್ಪಟ್ಟಿರುತ್ತದೆ. ಕೆಲವು ಹೋಟಲುಗಳಲ್ಲಿ ಹೆಬ್ಬಾಗಿಲಿನ ದೂಲದ ಮೇಲೆಯೇ ಇದು ಬರೆಯಲ್ಪಟ್ಟಿರುತ್ತದೆ. ಈ ಹೆಬ್ಬಾಗಿಲಿನ ಮೇಲೆ ಇದನ್ನು ಬರೆಯುವುದರಿಂದ ಒಂದೊಂದು ವೇಳೆ ಅನಾನುಕೂಲ ಆಗುವುದುಂಟು. ಕೆಲವು ದಿನಗಳ ಹಿಂದೆ ಇಂತಹ ಬರವಣಿಗೆಯಿದ್ದ ಹೋಟಲೊಂದು ದಿವಾಳಿಯಾಯಿತು. ಅದೇನು ಅಷ್ಟು ಸೋಜಿಗದ ಮಾತಲ್ಲ. ಏಕೆಂದರೆ ಬ್ರಾಹ್ಮಣರನ್ನು ಮಾತ್ರ ನಂಬಿದ ಹೋಟಲ ಮಾಣಿ, ಹೋಟಲು ವಾರಿಕೊಂಡು ಹೋಗುವುದರಲ್ಲಿ ಆಶ್ಚರ್ಯವೇನು ಇದೆ? ಆದರೆ ಅದೇ ಅಂಗಡಿಯನ್ನು ವೈದ್ಯನೊಬ್ಬನು ಬಾಡಿಗೆಗೆ ತೆಗೆದುಕೊಂಡು ಅವನ ದವಾಖಾನೆಯನ್ನು ಆರಂಭಿಸಿದ. ಈ ತಲೆಬಾಗಿಲ ಮೇಲಿನ ಬರವಣಿಗೆಯನ್ನು ಆತನು ಗಮನಿಸಿದಂತೆ ಕಾಣಲಿಲ್ಲ. ಅದರ ಕೆಳಗೇ ತನ್ನ ಬೋರ್ಡನ್ನೂ ಸಿಕ್ಕಿಸಿದ. ನೋಡಿದವರಿಗೆ—

ಬ್ರಾ ಹ್ಮ ಣ ರಿ ಗೆ ಮಾ ತ್ರ .
ಶ್ರೀ ವೆಂಕಟಾಚಲಪತಿ ಔಷಧಾಲಯ,
ಶ್ರೀಯುತ..............ಬಿರುದಾಂಕಿತರು,
ಇತ್ಯಾದಿ.

ಈ ರೀತಿ ಕಾಣಿಸುತ್ತಿತ್ತು.

ಇದೇ ಮೊದಲಾಯಿತು ನೋಡಿ. ಆ ವೈದ್ಯನ ಹತ್ತಿರ ಹೋಗುವವರೆಲ್ಲಾ ವೈದಿಕ ಬ್ರಾಹ್ಮಣರು ಮಾತ್ರ. ಏಕೆಂದರೆ ಲೌಕಿಕ ನವೀನ ಬ್ರಾಹ್ಮಣರಿಗೆ ತಾವು ಬ್ರಾಹ್ಮಣರೆಂದು ಹೇಳಿಕೊಳ್ಳಲು ಅಷ್ಟಾಗಿ ಕಾರಣಗಳಿರಲಿಲ್ಲ. ಬ್ರಾಹ್ಮಣ ಕುಲದಲ್ಲಿ ಜನಿಸಿದಾಕ್ಷಣವೇ ಬ್ರಾಹ್ಮಣರಾದವರೂ ತಮ್ಮ ಜೀವನ ರೀತಿಯಿಂದ ಆ ಹಕ್ಕನ್ನು ಕಳೆದುಕೊಂಡಿದ್ದವರಾದ್ದರಿಂದ, ಸರಕಾರದ ಅಂಗೀಕಾರ ಮುದ್ರೆ ಇಲ್ಲದಿದ್ದರೂ, ತಾವಾಗಿ ಬ್ರಾಹ್ಮಣರೆಂದು ಹೇಳಿಕೊಳ್ಳಲು ಹೆದರಿದ್ದರು. ಹಾಗಾಗಿ ವೈದ್ಯನ ಹತ್ತಿರ ಹೋಗುವವರೆಲ್ಲರೂ, ಶಾಲು ಹೊದ್ದವರು, ದರ್ಭೆ ಕೃಷ್ಣಾಂಜಿನಾಧಾರಿಗಳು, ಕೃಷ್ಣಾಂಜಿನ ಎಂದರೆ ಕಪ್ಪಾದ ವಸ್ತ್ರದವರೆಂದಲ್ಲ. ಬಿಳಿಯ ವಸ್ತ್ರವೇ ಮಡಿಮಡಿಯಾಗಿ ಕಡೆಗೆ ಕೃಷ್ಣಾಂಜಿನವಂತೆ ಕಣ್ಣಿಗೆ ಕಂಡೂ ಕೈಗೆ ತೋರಿಯೂ ಆ ಹೆಸರಾಂತುದು.

ಕಡೆಕಡೆಗೆ ವೈದ್ಯನ ಹತ್ತಿರ ಹೋದವರೆಲ್ಲರೂ, ಹೋಗುವಾಗಲೇ ದರ್ಭೆ ಹಿಡಿದು ಹೋಗುವವರೇ ಆದರು. ಇದನ್ನು ನೋಡಿಯೇ ಉಳಿದವರಾರೂ ಅಪಶಕುನವಾದೀತೆಂದು ಆ ದವಾಖಾನೆಯ ಬಳಿಯೇ ಸುಳಿಯಲಿಲ್ಲ.

ಈ ಕಾರಣದಿಂದಲೇ ದರ್ಭೆವೈದ್ಯನೆಂದು ಹೆಸರಾದ ವೈದ್ಯನು ತನ್ನ ಜೀವನಪಥವನ್ನು ಸಾಗಿಸಲಾರದೆ ಅಂಗಡಿ ಮುಚ್ಚಿ ಮುಂದೊಂದೂರಿಗೆ ಹೋದನು.

ಕೇವಲ ಒಂದು ಅಜಾಗರೂಕತೆಯಿಂದ, ಕೇವಲ ಒಂದು ಬೋರ್ಡಿನಿಂದ ಏನೇನು ಅನಾಹುತಗಳಾಗಬಹುದು ಎನ್ನುವುದಕ್ಕೆ ಬೇರೆ ನಿದರ್ಶನ ಬೇಕೆ?

---

# ಅವಳ ಸ್ವಭಾವವೇ ಹಾಗೆ

ಲೋವರ್ ಸೆಕೆಂಡರೀಗೆ ಕಟ್ಟಿದ್ದಾನೆ, ಈ ಸಾರಿ, ನನ್ನ ಕಿರೀ ಹುಡುಗ, ಶೇಷು. ಮೊದಲನೆಯ ಮೂರು ಜನರಿಗಂತೂ ಫೀಸು ತೆತ್ತುತೆತ್ತು ಓದಿಸುತ್ತಾ ಇದೇನೆ ಹೈಸ್ಕೂಲಿನಲ್ಲಿ; ಇವನಿಗಾದರೂ ಒಂದು ಫಸ್ಟ್ ಕ್ಲಾಸ್ ಬಂದರೆ, ಹೆಡ್ಮಾಸ್ಟರ ಹತ್ತಿರ ಗೋಗರೆದು, (ಅವರು ಹಲ್ಲು ಕಟ್ಟಿಸಿಕೊಂಡಿದ್ದು, ನನ್ನ ಸಾಹೇಬರ ಭಾವ ಮೈದುನನ ಅಂಗಡಿ ಪಕ್ಕದಂಗಡಿಯಲ್ಲೇ!) ಒಂದು ಫ್ರೀಷಿಪ್ ಸಂಪಾದಿಸೋಣ, ಎಂಬ ಆಸೆಮೇಲೆ, ಅವನನ್ನ ಈಗ ಹಲವು ದಿನಗಳಿಂದಲೂ ಬೆಳಗಿನ ಝಾವ ಐದು ಗಂಟೇಗೇ (ಹೊಸ ಟೈಂ ಪ್ರಕಾರ) ಎಬ್ಬಿಸಿ ಕೂರಿಸುತ್ತಾ ಇದೇನೆ. ಅಷ್ಟರೊಳಗೆ ನನ್ನ ಹೆಂಡತಿಗೆ ಆತುರ. ಆಫೀಸಿನಲ್ಲಿ ಲಕ್ಷಾಂತರ ರೂಪಾಯಿ ಆಡಳಿತದ ಕಾಗದಪತ್ರ ಎಲ್ಲಾನೂ ನೀರು ಕುಡಿದ ಹಾಗೆ ಸ್ವಾಹ ಮಾಡಿಬಿಡುತ್ತೇನೆ ಅಂತ ಜಂಭ ಕೊಚ್ಚುತ್ತೀರಲ್ಲಾ, ಹುಡುಗನಿಗೊಂದಿಷ್ಟು ಲೆಕ್ಕ ಹೇಳಿಕೊಡಬಾರದೆ? ಅಂತ ಅವಳು ಗೋಳಾಡಿಸುತ್ತಾಳೆ. ಸರಿ, ಕ್ರಿಸ್ಮಸ್ ರಜ ಮುಗಿದು ಅವನಿಗೆ ಸ್ಕೂಲು ನೆಟ್ಟಗೆ ಪ್ರಾರಂಭವಾಗಲಿ, ಅಂದೆ. ಬಾಗಿಲೂ ತೆರೆಯಿತು. ಪಾಠಗಳೂ ಪ್ರಾರಂಭವಾದುವು ಎಂದು ಶೇಷು ವರದಿ ಮಾಡಿದ. ನಾನೂ ಟ್ಯೂಷನ್ನಿಗೆ ಸಿದ್ಧನಾದೆ.

ಭಾನುವಾರ ಬೆಳಗ್ಗೆ ಎಂಟು ಗಂಟೆಗೆ ಹುಡುಗನನ್ನ ನನ್ನ ಮೇಜಿನ ಹತ್ತಿರಕ್ಕೆ ಕರೆದೆ. ಅವನೂ ಕೂಡ, ತಕ್ಕಮಟ್ಟಿಗೆ ಗೆಲುವಾಗಿಯೇ ಬಂದ. ತನ್ನ ಅಣ್ಣಂದಿರು ಯಾರಿಗೂ ಸಿಗದೆ ಇದ್ದ ಒಂದು ವಿಶೇಷ ಪ್ರವಚನಾನುಕೂಲ ದೊರೆಯಿತಲ್ಲ ಎಂಬ ಹೆಮ್ಮೆ ಅವನಿಗೆ. ನನ್ನ ಆಜ್ಞೆಯನ್ನು ಶಿರಸಾವಹಿಸಿ ಮೇಜಿನ ಮೇಲೆ ಮೊಳಕೈ ಊರಿ ಪೆನ್ನು ಬಾಗಿಸಿ ನಲವತ್ತನೆಯ ಅಭ್ಯಾಸದ ಎರಡನೆಯ ಲೆಕ್ಕವನ್ನು ಮಾಡುತ್ತಿದ್ದ. ಅವನ ಬೆನ್ನನ್ನೇ ಅವಲೋಕಿಸುತ್ತಿದ್ದ ನನಗೆ ಒಂದು ವಿಧವಾದ ಅಹಂಕಾರ ಉತ್ಪನ್ನವಾಯಿತು. ರಾಮಾನುಜಂ ಮೊದಲಾದ ಅಗಣಿತಗಣಿತ ಪಂಡಿತರೂ ಕೂಡ ನನ್ನಂತಹ ಯಾರೋ ಒಬ್ಬ ತಂದೆಯ ಮಕ್ಕಳು! ಅವರ ಬೆನ್ನು ಕೂಡ ಲೆಕ್ಕಮಾಡುವಾಗ ಬಗ್ಗಿರಬೇಕು! ಶೇಷುವಿನ ಹಾಗೆ ಅವರೂ ಕೂಡ ಪಿತೃವಾಕ್ಯ ಪರಿಪಾಲಕರಾಗಿ ಗುಣಾಕಾರ ಮಾಡಿರಬೇಕು!—ಎಂಬಿವೇ ಮುಂತಾದ ವಿಚಾರ ಲಹರಿಯಲ್ಲಿ ನನ್ನ ಮನ ಓಲಾಡಿತು. ಶೇಷು ಮಾಡುತ್ತಿದ್ದ ಲೆಕ್ಕವೋ, ಕೇವಲ ಸುಲಭವಾಗಿತ್ತು—"ಒಂದು ಆಫೀಸಿನಲ್ಲಿ ೧೮ ಗುಮಾಸ್ತೆಯರ ಸರಾಸರಿ ಸಂಬಳ ೪೫ ರೂಪಾಯಿ. ಅಲ್ಲಿರುವ ಒಟ್ಟು ೩೦ ಗುಮಾಸ್ತೆಯರಿಗೆ ಸರಾಸರಿ ಸಂಬಳ ೧೨೦ ರೂಪಾಯಿ ಆದರೆ, ಮಿಕ್ಕವರ ಸರಾಸರಿ ಸಂಬಳ ಎಷ್ಟು?" ಪರಂಪರಾನುಗತವಾದ ಅವನ ಡೊಂಕು ಸಲಾಮಿನ ಸಂಸ್ಕಾರಕ್ಕೆ ಈ ಲೆಕ್ಕವೇನು ಅಷ್ಟು ಕಷ್ಟವೇ?.... ಆದರೂ, ಆ ಮುಠ್ಠಾಳ, ೧೮ × ೪೫ ಎಂಬುದಕ್ಕೆ ಬದಲಾಗಿ ೧೮ × ೪೦ ಎಂದು ಹಾಕಿಕೊಂಡು, = ೭೦೦ ಎಂದು ಗುಣಿಸಿದಾಗ, ನನಗೆ ಒಮ್ಮೆಲೆ ಕೋಪೋದ್ರೇಕವಾಯಿತು. "ಕೋಪಾತ್ ಸಂಜಾಯತೆ ಕಲಹಂ" ಗೊತ್ತು. ಆದರೂ ಗುಮಾಸ್ತೆಯರಿಗೆ ಈ

ರೀತಿ ಎರಡು ಸಾರಿ ಸಂಬಳ ಕಡಿಮೆ ಮಾಡುವುದು ಪಿತೃದ್ರೋಹವಲ್ಲವೇ? ಜೋಟುದ್ದದ ಈ ಹುಡುಗ ೪೦ ಅಂತ ಬರೆದು ೭೦೦ ನೂರು ಅಂತ ಗುಣಿಸಿದರೆ, ಅದೇ ಕೆಟ್ಟ ಗಳಿಗೆಯಲ್ಲಿ ಯಾರಾದರೂ ಕೃಪಾಪ ತೋರಿಸಿ, ರಿಟ್ರೆಂಚ್‌ಮೆಂಟನ್ನು ತಂದುಹಾಕಿದರೆ, ಹೇಳೋದು ಯಾರ ಹತ್ತಿರ, ಕೇಳೋದು ಯಾರನ್ನ?

ತಕ್ಷಣವೇ ನನ್ನ ಮುಂದೆ ಬಾಗಿದ್ದ ಆ ಬೆನ್ನಿನ ಮೇಲೆ, ನನ್ನ ದಕ್ಷಿಣ ಮುಷ್ಟಿಯಿಂದ ಒಂದು ಬಾರಿಸಿದೆ. ನಿರೀಕ್ಷಿಸಿದ ಹಾಗೆ ಶೇಷು–'ಅಯ್ಯೋ' ಎಂದು ಕೂಗಿದ. ಅಡಿಗೆಮನೆಗೆ ಕೇಳಿಸಿತು. ಅಲ್ಲಿಂದ ಪ್ರತಿಧ್ವನಿತವಾಯಿತು. ಆಕೆಯ ದಂಡಯಾತ್ರೆಯ ಸೂಚನೆಯಾಗಿ ಹಲವು ಹಿತ್ತಾಳೆ ಪಾತ್ರೆಗಳು ಕೆಳಗೆ ಬಿದ್ದುವು. ಕೂಡಲೇ ಆಕೆಯೇ ಕಾಣಿಸಿಕೊಂಡಳು. ಅವಳ ಹಣೆಯಲ್ಲಿದ್ದ ಕುಂಕುಮದ ಬೊಟ್ಟು, ಕಿಡಿಗಳನ್ನು ಚಿಮ್ಮಿಸುತ್ತಿತ್ತು. "ಬಾರೋ ಇಲ್ಲಿ, ಶೇಷು! ನಿನ್ನ ಟ್ಯೂಷನ್ನೂ ಸಾಕು; ಪಾಸೂ ಸಾಕು; ನೀನು ಉದ್ಧಾರವಾಗುವುದೂ ಸಾಕು; ನೀನು ಫೀಸು ಕೊಡದೆ ಉಳಿದ ಹಣದಿಂದ ಯಾವುದಾದರೂ ಹೋಟಲಿನಲ್ಲಿ ಉದ್ದಿನಹಿಟ್ಟು ರುಬ್ಬಿಯಾದರೂ ಜೀವನ ನಡೆಸಬಹುದು....ಜೀವ ಒಂದುಳಿಸಿಕೊಂಡಿದ್ದರೆ...." ಎಂದು ಹೇಳುತ್ತಾ ಹುಡುಗನನ್ನು ದರದರನೆ ಎಳೆದುಕೊಂಡು ಹೋದಳು. ಹೋಗುತ್ತಾ, ಹಿಂದಕ್ಕೆ ತಿರುಗದೆ, "ನಿಮಗೆ ಮುಷ್ಟಿ ಕೆರೆಯುತ್ತಿದ್ದರೆ, ಗೋಡೆಗೆ ಬಡಿಯಿರಿ" ಎಂದು ನನ್ನ ಮನಸ್ಸಿಗೆ ನೇರವಾಗಿ ಒಂದು ಏಟು ಕೊಟ್ಟಳು. ಅವಳ ಸ್ವಭಾವವೇ ಹಾಗೆ. ಏನು, ಎತ್ತ, ಅಂತ ನನ್ನನ್ನ ವಿಚಾರಿಸಲೇ ಇಲ್ಲ; ತಪ್ಪೋ ನೆಪ್ಪೋ ಎಂದು ತೀರ್ಪೂ ಕೊಡಲಿಲ್ಲ. ಮನೆಗೆ ಬರುವ ಆಳು, ಅಗಸ, ಮುಂತಾದವರ ವಿಷಯದಲ್ಲೆಲ್ಲ ಅವಳು ಸೌಜನ್ಯದಿಂದಲೇ ವರ್ತಿಸುತ್ತಾಳೆ; ಅವರನ್ನೆಲ್ಲ ಕನಿಕರದಿಂದ ಕಾಣುತ್ತಾಳೆ; ನ್ಯಾಯಾನ್ಯಾಯ ವಿಚಾರಿಸದೆ ಅವರನ್ನ ಒಂದು ಮಾತು ಕೂಡ ಅನ್ನುವುದಿಲ್ಲ. ಆದರೆ, ನಾನು ಶುದ್ಧ ಶಿಬಿ ಚಕ್ರವರ್ತಿ; ಜನ್ಮತಃ ಜಡಭರತ, ಎಂಬುದೇ ಅವಳ ನಿರ್ಧಾರ.

ನನ್ನ ಮೇಜಿನ ಮುಂದಿನ ಗೋಡೆ ಕ್ಯಾಲೆಂಡರಿನಲ್ಲಿದ್ದ ಸಿನಿಮಾ ನಟಿಗೆ ನನ್ನ ಕಷ್ಟವನ್ನು ಹೇಳಿಕೊಂಡೆ. ಆಕೆ, ಒಂದೇ ಸಮನೆ ಹಲ್ಲು ಕಿರಿಯುತ್ತಾ ಕೂತಿದ್ದಳು. ಅವಳ ಸ್ವಭಾವವೇ ಹಾಗೆ.



# ಸಾವಿನಕೂಡ ಸರಸ

"ಸುಬ್ಬಾ, ಲೋ ಸುಬ್ಬಾ-ಏನು ಮಾಡುತ್ತಿದ್ದೀಯೋ ?-ಬೀಸುತ್ತಿದ್ದೀಯಾ ? ಏನ್ನ ? ರಾಗೀನೇ-ನಾನೂ ಬೀಸುತೀನಿ ನಿನ್ನ ಜತೆಗೆ-ಸುಮ್ಮನೆ ಇರೋಕೆ ಆಗೋಲ್ಲ ಬೇಸಕ್ಕೆ ಇವತ್ತು-ಯಾಕೋ ಒಂದು ತರಹ ಇದೆ ನನಗೆ-ಬೇಡ, ಬೀಸಬೇಡಿ ಸ್ವಾಮಿ ಅಂತೀಯೋನೋ ?' ಪರವಾಯಿಲ್ಲ ಕಣೋ-ಬೀಸಿದರೆ ಶಾನುಭೋಗ ಪದವಿಗೆ ಕೇಡ್ಬನ ಬರುತ್ತೇನೋ ಎಲ್ಲಾದರೂ ?-

"....ಊಸ್ಸಪ್ಪಾ....ಉಸ್ಸಪ್ಪಾ-ಏನು ತಲೇನಪ್ಪ ನನ್ನ ಕುತ್ತಿಗೆ ಮೇಲಿ ಕೂತಿ ಯೋದು-ನನ್ನ ತಲೆ ಹಾಗೇ ಕಾಣೋಲ್ಲ-ಇನ್ನ್ಯಾರದೋ ತಲೆ ತಂದು ಅಂಟಿಸಿದ ಹಾಗೇ ಇದೆಯಪ್ಪ-ಅದಕ್ಕೇ ಅದು ಅಷ್ಟು ಒದ್ದಾಡುತ್ತಿದೆಯಯ್ಯ-ಒಳ್ಳೇ ಬುಗುರಿಚೆಂಡಿನ ಹಾಗೇ-

"....ಸುಬ್ಬಾ, ಬರೀ ರಾಗೀಕಲ್ಲು ತಿರುಗುತ್ತಿದೆಯೋ ಅಥವಾ ನನ್ನ ತಲೇನೇ ರಾಗೀಕಲ್ಲಿನ ಹಾಗೆ ತಿರುಗುತ್ತಿವೆಯೋ ಅಥವಾ ಎರಡೂ ಒಟ್ಟಿಗೆ ತಿರುಗುತ್ತಿವೆಯೋ ?.... ಅಥವಾ ರಾಗೀ ಕಲ್ಲು ಎರಡೂ ಇಲ್ಲವೋ....ಇಲ್ಲಿ....

"ಯಾಕೋ ಹೀಗೆ ನೋಡ್ತೀ ? ಯಾಕೋ ? ಗಾಬರಿ ಆಗಿದ್ದೀ ! ಸುಬ್ಬಾ ! ನಿಜವಾಗಿ ನನಗೆ ಹೇಗೋ ಇದೆ. ಕಸವಿಸಿ-ಬೀಸೋದು ನಿಲ್ಲಿಸಿದರೂ ನನ್ನ ತಲೆ ನೋಡು ! ಹೇಗೆ ಅದರುತಾ ಇದೆ-ಅಯ್ಯೋ ವೆಂಕಟರಮಣಾ-ಇಲ್ಲಿ ನೋಡು-ಯಾಕೋ ಕೈಗಳು ಕೂಡ ತರತರ-ತರತರ ನಡುಗುತ್ತಿವೆ. ಇದೇನು ಬಂತಪ್ಪಾ!.... ಇಲ್ಲಪ್ಪೋ, ಸ್ವಲ್ಪ ಚಳಿ ಇಲ್ಲ. ಒಂದು ತರಹದ ಸಂಕಟ-ನನ್ನ ಕೈ ಮುಟ್ಟಿ ನೋಡು-ತಣ್ಣಗಿದ್ದ ಹಾಗೆ ಇದೆ-ಅಯ್ಯಯ್ಯೋ, ಕಾಲು-ಕಾಲು ನಡುಗುತಿದೆ-ಹೋ-ಹೋದೆ-ನ-ನನ್ನ ಉಸಿರಿನ ಕೊ-ಕೊ-ಕೊನೆಗಾಲ ಬಂತು....

"-ಸುಬ್ಬಾ-ಹೋಗು-ಓಡು-ಅವಳನ್ನು, ವಾಸೂನ ಇಲ್ಲಿಗೆ ಕರೀ-ಹೋದೆಯಾ ? ಲೇ ಬೇಗ ಬಾರೇ-ಬಾ ಇಲ್ಲಿ-ವಾಸೂ !-ವಾಸು ಎಲ್ಲಿ ?-ಮನೇಲಿ ಇಲ್ಲವೇ ? ಸುಬ್ಬಾ, ಬೇಗ, ಅವನನ್ನ ಕರಕೊಂಡು ಬಾ....

"ಎಲ್ಲೀ....ನಿ-ನಿನ್ನ ತೊಡೆ ಮೇಲೆ ನನ್ನ ತಲೆ ಇಡು-ಹಾಗಲ್ಲ-ಹಾಗೇ. ಹಾಗೇ-ಗಾಬರಿಪಡಬೇಡ-ಅಳಬೇಡ-ಆಗುವುದಾಗುತ್ತೆ-ಅಳಬೇಡ.

"-ಎಲ್ಲಿ ವಾಸು ? ಬಾಪ್ಪಾ-ನನಗೆ ಕೊನೆಗಾಲ ಬಂದಿದೆ-ಅಳಬೇಡ-ಗಾಬರಿ ಆಗ ಬೇಡ-ಕೈಕಾಲು ಅದುರುತಿದೆ-ತಲೆ ನಡುಕ-ಶ್ವಾನೆ ಹೊತ್ತಿಲ್ಲ-ರೆಡ್ಡೀ-ನೀನೂ ಬಂದೆಯಾ-ನನ್ನ ಆಸ್ತಿ ಎಲ್ಲಾ ವಾಸೂಗೆ-೩೦೦ ರೂಪಾಯಿ ಈ ಊರು ಹೈದರ್ ಸಾಬೀಗೆ ಸಾ-ಸಾಲ-ವಸೂಲ್ ಮಾಡು-ರೈತರ ತಿಮ್ಮಣ್ಣಿಗೆ ೧ ಖಂಡುಗ ಭತ್ತ ಸಾಲ-ಚೆನ್ನಮ್ಮ ಅವ ಳದು ೪೦ ರೂಪಾಯಿ ಬಾಕಿ-ಲೆಕ್ಕಪತ್ರಗಳು ವಾಸೂಗೆ-ಎಲ್ಲಾ ಅನುಕೂಲ ಮಾಡಯ್ಯ-ಎಲ್ಲಿ. ನೋತುಕೊಡು-ವಾಸೂ, ನಿಮ್ಮಮ್ಮನ್ನ ಕಷ್ಟಪಡಿಸಬೇಡ-ನೋ, ನೋಡಿಕೋ-ಲೇ-ಅಳಬೇಡವೇ-ರಾಮಾ, ರಾಮಾ, ವಾಸೂ, ಹತ್ತಿ....ಹತ್ತಿರ ಬಾ-

"ಯಾರು ಕೂಗಿದ್ದು ? ಬೇರೆ ಲೋಕದವರೇ ?....ಓ ಚಿನ್ನಮ್ಮನೇ–ಏನಮ್ಮಾ.... ಯಾವಾಗಿಂದ ಹೀಗೆ ? ಈಗ ಗಂಟೆಯಿಂದ....ಯಾಕೆ ? ದೇವರೇ ಬಲ್ಲ–ಏನಾಗುತ್ತಿದೆ ? ತಲೆತಿರುಗೂ, ಸಂಕಟ–ಏನು ತಿಂದೆ ?–ಏನೂ ಇಲ್ಲ–ಮಂದು ತಿಂದೆ–ಮುನಿಶಾಮಿ ತಲೆ ನೋವಿಗೆ ಕೊಟ್ಟ–ಇನ್ನೇನೇನೂ ಇಲ್ಲ–ಹಾಳು–

....ಏನು ? ತಪ್ಪು ಮಂದು ಕೊಟ್ಟಿರಬಹುದೆ ? ಏನು ಮಾಡಿದನೋ ಯಾರು ಬಲ್ಲರು ? – ವಿಷವೋ–ಸುಡುಗಾಡೋ....ಹೂ ಅಂತಾದ್ದೇ....ಅದೇ ರುಚಿಯೇ....ತಿಂದ ಸ್ವ–ಸ್ವಲ್ಪ ಹೊತ್ತಿನಮೇಲೆ ತಲೆ ತಿರುಗೀ ತಿರುಗೀ– ಹುಶ ! ಅಪ್ಪಾ.

"....ಏನು ? ಅಫೀಮು ಗುಳಿಗೆ !....ಭ್ರಾಂತಿ, ಭ್ರಾಂತಿ, ಕೈಕಾಲು ಅದುರುವುದು ಹೀಗೆ–ಅಫೀಮು ಮಂದು ತಿಂದರೆ ? ಸಾವು ಬಂದಿದೆ–ಇನ್ನೇನಿಲ್ಲ.

"ಇದೇನಿದು ? ಯಾರು ನನ್ನ ಮುಟ್ಟುವುದು ? ಅಯ್ಯೋ, ಯಾರೋ ಎಳೆಯು ತ್ತಿದ್ದಾರಲ್ಲ ರಾಮ ರಾಮಾ–ಹೋದೆ ! ಯಾರು ಇವರು ! ಮುನಿಶಾಮಿ ಹಾಗೇ ಇದ್ದಾನೆ. ಏನದು ! ಬಿಡಿ....ಬಾಯಲ್ಲಿ ಬಿಡಿ ಗಂಗೋದಕ. ಅ–ಥೂಥೂ....ಹಾ....

"....ಖಾರ....ಅಬ್ಬಾ ಖಾರ....ಗಂಗೋದಕ ಖಾರವೇ–ಅ, ಈರುಳ್ಳಿ ರಸವೇ ? ಯಾಕೆ ? ಯಾಕೇ ಅಂದಿರಿ ? ಮತ್ತು ಇಲ್ಲೀಂತಲೇ ! ತಪ್ಪಿ ರಾಮು ಮಂದು ಕೊಟ್ಟನೆ ?....ಅಫೀಮು ಗುಳಿಗೆಯೇ ಅದು ? – ಏನು ? ಸಾಯುವುದಿಲ್ಲವೇ ನಾನು ?

"ಏನಾದರೂ ಇರಲಿ, ಒಳಗೆ ಮಲಗಿಸಬೇಡಿ. ಕೆಟ್ಟ ನಕ್ಷತ್ರವಾದರೆ ಫಜೀತಿ.

"–ನನಗೆ ಹುಚ್ಚೆ ?–ಇಲ್ಲಯ್ಯಾ ಇಲ್ಲ. ಮೆಲ್ಲಗೆ ಕರೆದುಕೊಂಡು ಹೋಗಿ....ಹಾಸಿಗೆ ಬೇಡ–ಮಲಗಿಸಬೇಡಿ ದಮ್ಮಯ್ಯಾ–ಕೂತೇ ಇರುತ್ತೇನೆ, ಹೆಚ್ಚಾದರೆ ಹೊರಗೆ ಬೇಗ ಕರೆದುಕೊಂಡುಹೋಗಿ–

"ಮತ್ತೇನು ? ಮತ್ತೇರಿಸುವ ಔಷಧವೆ ? ಎಷ್ಟಪ್ಪಾ–

"–ಏನು ದಿಗಿಲೂ ಇಲ್ಲವೆ ಮುನಿಶಾಮಿ ? – ಯಾಕೆ ಅಫೀಮು ಕೊಟ್ಟೆ ? – ಗುರುತು ತಪ್ಪಿತೆ ? ಒಳ್ಳೆ ಕೆಲಸಮಾಡಿದೆ. ನಿಜವಾದ ವಿಷ ಕೊಟ್ಟಿದ್ದರೆ ?....ಹೋಗಲಿ ಬಿಡು ದೇವರು ಇಷ್ಟಕ್ಕೆ ಪಾರುಮಾಡಿಸಿದನಲ್ಲ....ಲೇ ! ಲೇ ! ದೇವರಿಗೆ ಮುಡುಪು ಕಟ್ಟಿಡು ಮೊದಲು, ತಿಂಗಳೊಳಗಾಗಿ ಹರಕೆಗಳನ್ನೂ, ಹಿಂದಿನ ಬಾಕಿ, ಈಗ ಮಾಡೋದು ಎಲ್ಲಾ ಸಲ್ಲಿಸೋಣ....ವಾಸೂ, ನಿದ್ದೆ ಬರುವಹಾಗಿದೆ....ಸರಿಯಾಗಿ ಹೊದ್ದಿಸಪ್ಪ–ಅ, ಎಳು ತ್ತಲೂ ಕಾಫೀ ಕೊಡು. ಮಾಡಿಟ್ಟಿರು ಎಂದು ನಿಮ್ಮಮ್ಮನಿಗೆ ಹೇಳು–ಮುನಿಶಾಮಿ, ಹೋಗ್ತೀಯಾ ? ಹೋಗಪ್ಪ....ದೇವರು ದೊಡ್ಡವನಯ್ಯಾ, ಯಾಕೆ ಪೇಚಾಡುತ್ತೀ ಹೋಗು....ಹೂ ನಡಪ್ಪಾ – ಹಾಗೇ ಕಿಟಿಕಿ ಬಾಗಿಲು ಕೊಂಚ ಮರೆ ಮಾಡೋ.... ಸರಿ, ಬಿಡು."

—ಎಂ. ಆರ್. ಲ.

# ರಾಮುವಿನ ಸಮಸ್ಯೆ

ನಮ್ಮ ರಾಮು ನೀರು ಕುಡಿದ ಹಾಗೆ ಪರೀಕ್ಷೆಗಳನ್ನೆಲ್ಲಾ ಪಾಸುಮಾಡಿಬಿಟ್ಟ. ನಾವುಗಳೆಲ್ಲಾ ರೆಜಿಸ್ಟ್ರಾರ್ರ ಹೆಸರಿನ ಮೇಲೆಮೇಲೆ ಸುಳಿದಾಡುತ್ತಿದ್ದಾಗ ಅವನು ಪಟ್ಟಿಯ ತಲೆಯಮೇಲೆ ಮೆರೆಯುತ್ತಿದ್ದ. ಇಷ್ಟಾದರೂ ಶನಿವಾರ ರಾತ್ರಿ ಭಜನೆಮನೆಯಲ್ಲಿ ಹಾಜರು, ಭಾನುವಾರ ಮಧ್ಯಾಹ್ನ ಸಿನಿಮಾದಲ್ಲಿ ಹಾಜರು. ಕಡಲೆಕಾಯಿ ಪರಷೆ ಅಂದರೆ ಬಸವನ ಬಾಲದ ಮೇಲೆ ರಾಮು ಸಿದ್ಧ. ಕಡಲೆಕಾಯಿ ಅಗಿಯುತ್ತಾ- ಎಂ.ಎ. ಪ್ಯಾಸಾಯಿತು. ಮುಂದೆ ಏನು ಮಾಡಬೇಕು ಎಂದು ಯೋಚನೆ. ಎಲ್ಲಿಯಾದರೂ ಗುಮಾಸ್ತೆಯಾಗಿ ಸೇರಿಕೊಂಡು ಹಗಲೆಲ್ಲಾ ಮಸುಕು ಕೊಠಡಿಯಲ್ಲಿ ಕಾಲ ಕಳೆದು ಕಡೆಗೆ ಕೌನ್ಸಿಲ್ರಾಗೋಣವೇ? ಅಥವಾ ಯಾವುದಾದರೂ ವಳ್ಳಾಲಿ ವ್ಯಾಪಾರ ಆರಂಭಿಸಿ ಲೋಕವನ್ನೆಲ್ಲಾ ಸಂಚರಿಸುತ್ತಾ ಜೀವನೋಪಾಯ ಕಂಡುಹಿಡಿಯೋಣವೇ ಎಂಬ ಪ್ರಶ್ನೆಗಳು ಅವನನ್ನು ಬೆನ್ನಹತ್ತಿದ್ದವು.

ಕಡೆಗೆ ದೊಡ್ಡವರ ಸಲಹೆ ತೆಗೆದುಕೊಂಡು ಸ್ಥಿರಪಡಿಸೋಣ ಎಂದು, ತನ್ನ ಸೋದರಮಾವನ ಹತ್ತಿರ ಹೋಗಿ ಅವರ ಅಭಿಪ್ರಾಯವನ್ನು ಕೇಳಿದ. ಇವನ ಸೋದರಮಾವನವರು ಬ್ಯಾಂಕೊಂದರಲ್ಲಿ ಗುಮಾಸ್ತೆಯಾಗಿ ಸೇರಿಕೊಂಡು ಅಲ್ಲಿಯೇ ಕಾರ್ಯದರ್ಶಿಗಳಾಗಿ, ಬ್ಯಾಂಕಿನ ಆಡಳಿತಗಳನ್ನೆಲ್ಲಾ ಒಂದಕ್ಕೆ ಹತ್ತರಂತೆ ಹೆಚ್ಚಿಸಿ, ಕಡೆಗೆ ಸರಕಾರದ ಗಮನವನ್ನೂ ಸೆಳೆದು, ಸರಕಾರದ ಆರ್ಥಿಕ ಸಚಿವರಾಗಿ ಕೆಲಸ ಮಾಡಿ ನಂತರ ವಿಶ್ರಾಂತಿಪಡೆದು, ದೊಡ್ಡ ಮಹಡಿಮನೆಯಲ್ಲಿ ವಾಸವಾಗಿದ್ದವರು. ರಾಮುವು ಅವರ ಸಲಹೆ ಪಡೆಯಲು ಹೋದಾಗ ಅವರು ಈ ಮಾತುಗಳನ್ನಾಡಿದರು.

ನೋಡು, ರಾಮು, ನಾನೂ ನಿನ್ನಂತೆಯೇ ಹುಡುಗನಾಗಿ ಜೀವನಮಾರ್ಗದಲ್ಲಿ ಕಾಲಿಡುವ ಮೊದಲು ಯಾರೂ ಸರಿಯಾಗಿ ಬುದ್ಧಿಯ ಮಾತುಗಳನ್ನಾಡಲಿಲ್ಲ. ಹಾಗಾಗಿ ಬ್ಯಾಂಕಿನಲ್ಲಿ ಕೆಲಸಕ್ಕೆ ಸೇರಿದೆ. ಆಗ ಬೆಳಿಗ್ಗೆ ಏಳು ಗಂಟೆಗೆ ಊಟಮಾಡಿ ಬ್ಯಾಂಕಿಗೆ ಎಂಟು ಗಂಟೆಗೆ ಹೋಗಿ ಕೆಲಸಕ್ಕೆಂದು ಮೇಜಿನಮುಂದೆ ಕುಳಿತರೆ ಮಧ್ಯಾಹ್ನ ಅರ್ಧಗಂಟೆ ವಿರಾಮಬಿಟ್ಟರೆ, ಸಾಯಂಕಾಲ ಏಳು ಗಂಟೆಯ ತನಕ ಅಲ್ಲಿಯೇ ಕುಳಿತು ಕೆಲಸಮಾಡಬೇಕಾಯಿತು. ಕೆಲಸದಿಂದ ವಿಶ್ರಾಂತಿ ಪಡೆಯುವ ತನಕ ಇದೇ ರೂಢಿಯಾಗಿ ಹೋಯಿತು. ಬೆಳಕು ಗಾಳಿಗಳನ್ನೇ ಕಾಣದೆ, ಹೊಟ್ಟೆ ಹಸಿವನ್ನೂ ಅನುಭವಿಸದೆ, ಹೊಟ್ಟೆ ತುಂಬಾ ಊಟವನ್ನೂ ಮಾಡಲಾರದೆ, ಹಾಳು ಔಷಧಿಗಳನ್ನು ಸೇವಿಸಿಕೊಂಡು ನನ್ನ ಜೀವಮಾನವನ್ನೆಲ್ಲಾ ಕಳೆಯಬೇಕಾಯಿತು. ಈಗ ನೋಡು, ನನಗೆ ೫೮ ವರ್ಷ. ನೋಡಿದರೆ ನೂರೆಂಟರಂತೆ ಕಾಣುತ್ತೆ. ಬೆಳಿಗ್ಗೆಯಿಂದ ಹೊಟ್ಟೆನೋವಿಗೆ ಪ್ರಾರಂಭ. ಏನಾದರೂ ತಿಂದರೆ ಇನ್ನೂ ಹೆಚ್ಚಾಗುತ್ತೆ. ತಿನ್ನದೆ ಇದ್ದರೆ ಸುಸ್ತಾಗುತ್ತೆ. ನನ್ನ ಸ್ನೇಹಿತರೆಲ್ಲರೂ ಹಾಸ್ಯಮಾಡುವುದಕ್ಕಾರಂಭಿಸಿದ್ದಾರೆ. ಕುಚೋದ್ಯದ ಮಾತುಗಳನ್ನಾ

ಡುತ್ತಾರೆ. ಬ್ಯಾಂಕಿನಲ್ಲಿದ್ದಾಗ ತಿಂದಿದ್ದುದನ್ನೆಲ್ಲಾ ಈಗ ಜೀರ್ಣಿಸಿಕೊ, ಬೇರೆ ಏಕೆ ಊಟ ಎಂದು ಕುಕ್ಕುತ್ತಾರೆ. ನನ್ನ ಹಾಗೆ ಕೊಠಡಿಯಲ್ಲಿ ಕುಳಿತು ಕೆಲಸಮಾಡುವುದಕ್ಕಿಂತ, ನಿನ್ನ ದೊಡ್ಡಪ್ಪ ಶಾಮರಾಯನನ್ನು ನೋಡು. ಆತನೂ ನಾನೂ ಒಂದೇ ವಯಸ್ಸಿನವರು. ಈಗಲೂ ಆತನು ಎಂಟು ಚಿರೋಟಿ ತಿನ್ನುತ್ತಾನೆ. ತಿಂದು ಜೀರ್ಣಿಸಿಕೊಳ್ಳುತ್ತಾನೆ. ಪ್ರಪಂಚವನ್ನೆಲ್ಲಾ ಸುತ್ತಿದ್ದಾನೆ. ವಕ್ಕಾಲಿ ಕೆಲಸ ಆರಂಭಿಸಿ ಆ ನೆಪದಿಂದ ಕಾಡು, ಊರು, ಮೇಡು, ಹಳ್ಳಿ ಎಲ್ಲವನ್ನೂ ಸುತ್ತಿದ್ದಾನೆ. ಅವನ ಒಂದೊಂದು ಅನುಭವಗಳೂ ಅವನಿಗೆ ನವ ಚೈತನ್ಯವನ್ನು ಕೊಟ್ಟಿವೆ. ಒಂದು ಯೋಚನೆ ತಲೆಗೆಹಚ್ಚಿಕೊಳ್ಳದೇ ಈಗಲೂ ಮೂವತ್ತು ವಯಸ್ಸಿನವನಂತೆ ಇದ್ದಾನೆ. ಅವನ ತರಹ ಕೆಲಸ ಯಾವುದಾದರೂ ಮಾಡಿಕೊಂಡರೆ ಒಳ್ಳೆಯದು.

ಈ ಹಿತವಾದವನ್ನು ನೆನೆಯುತ್ತಾ ರಾಮುವು ಹಿಂತಿರುಗಿದನು. ದೊಡ್ಡಪ್ಪ ಶ್ಯಾಮರಾಯನನ್ನೂ ಒಂದು ಮಾತು ಕೇಳೋಣ ಎಂದು ಅಲ್ಲಿಗೆ ಹೋದನು. ಶ್ಯಾಮರಾಯನು ದೇವರ ನೈವೇದ್ಯದ ತೆಂಗಿನ ಚಿಪ್ಪೊಂದನ್ನು ಕೈಲೇ ಮುರಿಯುತ್ತಾ ಮುಗಿಸುತ್ತಿದ್ದನು. ರಾಮುವನ್ನು ಆದರದಿಂದ ಬರಮಾಡಿಕೊಂಡು ಅವನಿಗೆ ಈ ರೀತಿ ಬುದ್ಧಿ ಹೇಳಿದನು.

ನೋಡು, ರಾಮು, ನನಗೆ ಯಾರೂ ಬುದ್ಧಿ ಸರಿಯಾಗಿ ಹೇಳಲಿಲ್ಲ. ಆ ಕಾರಣ ನಾನು ಹಾಳು ವಕ್ಕಾಲಿ ಕಾರ್ಯಕ್ಕೆ ಮೊದಲು ಮಾಡಿ ಆ ವ್ಯಾಪಾರದಲ್ಲೇ ಜೀವಮಾನವನ್ನೆಲ್ಲಾ ಮುಗಿಸಿದೆ. ನಿಂತಲ್ಲಿ ಎರಡು ದಿನ ನಿಲ್ಲಲಾರದೆ, ಮನೆ ಮಠ ಕಾಣದೆ, ಊರೂರು ಸುತ್ತಿಸುತ್ತಿ ಅತ್ತೀಕಾಯಿ ಆಗಿಬಿಟ್ಟೆ. ಒಂದೊಂದು ಕಡೆ ಹಾವು ಚೇಳು ತಪ್ಪಿಸಿಕೊಳ್ಳುವುದೇ ಪ್ರಯಾಸವಾದರೆ ಇನ್ನೊಂದು ಕಡೆ ಊರ ಜನರ ತಕ್ಕಿನಿಂದ ಪಾರಾಗುವುದೇ ಕಷ್ಟವಾಗುತ್ತಿತ್ತು. ಕಡೆಗೆ ವಯಸ್ಸಾಯಿತೆಂದು ಮನೆಗೆ ವಿಶ್ರಾಂತಿಗೆಂದು ಬಂದರೆ ಕೂತುಕೊಂಡು ತಿನ್ನಲು ಹಣ ಕೂಡ ಇಲ್ಲ. ಆದರೆ ನಿನ್ನ ಸೋದರ ಮಾವನನ್ನು ನೋಡು. ಅವನೂ ನನ್ನಂತೆಯೇ ಓದು ಮುಗಿಸಿದ, ಆದರೆ ಸ್ಥಿರವಾದ ಬ್ಯಾಂಕೊಂದರಲ್ಲಿ ಗುಮಾಸ್ತೆಗೆ ಸೇರಿಕೊಂಡ. ಒಂದೇ ಕೆಲಸದಲ್ಲಿ ನಿರತನಾಗಿ ಕಡೆಗೆ ಆರ್ಥಿಕ ಸಚಿವನಾದ, ಈಗ ಎಲ್ಲೆಲ್ಲೂ ಪುರಸ್ಕಾರ, ರಾಜಮರ್ಯಾದೆ. ಹುಳಿತುಹೋಗುವಷ್ಟು ಹಣ, ಸುಖವಾಗಿದ್ದಾನೆ. ಆ ತೆರನಾದ ಯಾವುದಾದರೂ ಶಾಶ್ವತವಾದ ಕೆಲಸ ನೋಡಿಕೊಂಡು ಸುಖವಾಗಿರು.

ಇವೆರಡು ಹಿತವಾದಗಳನ್ನೂ ಮೆಲುಕು ಹಾಕುತ್ತಾ ರಾಮುವು ಹಿಂತಿರುಗಿದ. ಶಾಶ್ವತವಾದ ಪ್ರಗತಿಯಿರುವ ಕೆಲಸವಾಗಬೇಕು. ಹಾಗೂ ಹೊರಗಡೆ ಸುತ್ತಾಡಿ ದೇಹದಾರ್ಢ್ಯವಾಗುವ ಕೆಲಸವೂ ಆಗಬೇಕು. ಇವೆರಡೂ ಆಗಬೇಕಾದ ಕೆಲಸವನ್ನು ಯೋಚಿಸಿ ಯೋಚಿಸಿ ಕಡೆಗೆ ಸೈನ್ಯದ ಇಲಾಖೆಗೆ ಸೇರಿದರೆ ಅನುಕೂಲವೆಂದು ಸೈನ್ಯಕ್ಕೆ ಸೇರಿಕೊಂಡ.

ಸೈನ್ಯಾಧಿಕಾರಿಗಳೇನು ಮಾಡಿದರು ಗೊತ್ತೆ? ಇಷ್ಟು ಹೆಚ್ಚು ವಿದ್ಯಾಭ್ಯಾಸ

ಮಾಡಿದ ಯುವಕನನ್ನು ಸೈನ್ಯದಲ್ಲಿ ಏಕೆ ವ್ಯರ್ಥಮಾಡುವುದು ಎಂದು, ಸೈನ್ಯಾಧಿಕಾರಿಗಳ ಆಪ್ತ ಕಾರ್ಯದರ್ಶಿಯನ್ನಾಗಿ ನೇಮಿಸಿಕೊಂಡರು. ಈಗ ಕವಾತು ಮಾಡುವವೇಳೆಗೆ ರಾಮುವು ಕೊಠಡಿಯಲ್ಲಿ ಮೇಜಿನ ಮುಂದೆ ಕುಳಿತರೆ ರಾತ್ರಿಯತನಕ ಅಲ್ಲಿಯೇ ಶಾಶ್ವತವಾಗಿ ಕೆಲಸಮಾಡುವಂತಾಗಿದೆ.





“ಮೇಷ್ಟ್ರು ಬೋರ್ಡಿನ ಮೇಲೆಮಾಡಿದಾಗ ಈ ಲೆಖ್ಖ ಸರಿಯಾಗ್ಬಂತು ಅಂತ ನಿಜವಾಗಿ ಗೊತ್ತೇನೋ!”

# ಗದುಗಿನ ವೀರನಾರಾಯಣ

ಗದುಗಿನಿಂದ ಬಂದ ಶ್ರೀಯುತ ವೀರನಾರಾಯಣರಾಯರು ಅಂದು ಮದ್ರಾಸಿಗೆ ಏಕೆ ಹೋಗಬೇಕೆಂದಿದ್ದರೊ ಅದು ಆಗಲೂ ನನಗೆ ತಿಳಿಯಲಿಲ್ಲ—ಈಗಲೂ ನನಗೆ ಗೊತ್ತಿಲ್ಲ. ಆದರೆ ಆತನೇನೋ ಗದುಗಿನಿಂದ ಬಂದು ಬೆಂಗಳೂರಿನಿಂದ ಮದ್ರಾಸಿಗೆ ಪ್ರಯಾಣ ಬೆಳಸಿದನು. ನಮ್ಮ್ಮೂರ್ವರ ಸ್ನೇಹಿತನೊಬ್ಬನು ಗದುಗಿನಿಂದ ಒಮ್ಮೆ ಒಂದು ತಾರು ಕಳಿಸಿದನು. ಶ್ರೀ ವೀರನಾರಾಯಣ ಸಾಹೇಬರು ನಮ್ಮೂರಿಗೆ ಬೆಳಿಗ್ಗೆ ಬರುವರೆಂದೂ, ಆ ಬೆಳಿಗ್ಗೆಯೇ ಮದ್ರಾಸಿಗೆ ಜರೂರು ಪ್ರಯಾಣ ಮಾಡುವರೆಂದೂ, ನಾನು ಬೆಂಗಳೂರಿನಲ್ಲಿ ಅವರಿರುವತನಕ, ಅವರ ಯೋಗಕ್ಷೇಮವನ್ನು ನೋಡಿಕೊಳ್ಳಬೇಕೆಂದೂ ಅದರಲ್ಲಿ ತಿಳಿಸಿತ್ತು.

ನನಗೆ ತಾರು ಬಂದ ದಿನವೆಲ್ಲಾ ಯೋಚನೆ. ಗದುಗಿನ ವೀರನಾರಾಯಣರಾಯರು ನಮ್ಮೂರಿಗೆ ಬಂದಾಗ ಅವರ ಆತಿಥ್ಯವನ್ನು ಚೆನ್ನಾಗಿಯೇ ಮಾಡಿದೆನೆಂದರೆ, ಆತನು ನನ್ನನ್ನು ಖಂಡಿತವಾಗಿಯೂ ಮುಂದಿನ ನಾಡಹಬ್ಬಕ್ಕೆ ಗದುಗಿಗೆ ಕರೆದೇ ಕರೆಯುತ್ತಾನೆ. ಅಷ್ಟು ಹೆಸರಾದವರು ಖಂಡಿತವಾಗಿಯೂ ಶ್ರೀಮಂತರೇ ಇರಬೇಕು. ಇವರುಗಳ ಪರಿಚಯ ಮಾಡಿಕೊಂಡು ಅವರ ಮನಸ್ಸನ್ನು ಒಲಿಸಿಕೊಳ್ಳಲೇಬೇಕು. ಅಲ್ಲದೇ ಇಂತಹವರ ಮನ ಒಲಿಸಿದರೆ ಕರ್ಣಾಟಕದ ಏಕೀಕರಣ ಕರಗತವಾದಂತೆಯೇ, ಇದಕ್ಕೆ ನಾನಾದರೂ ಏನು ಕಷ್ಟಪಡಬೇಕು. ರೈಲ್ವೆ ನಿಲ್ದಾಣಕ್ಕೆ ಹೋಗಿ ಅವರ ಅನುಕೂಲಗಳನ್ನು ನೋಡಿಕೊಂಡರಾಯಿತು ಎರಡು ಗಂಟೆಗಳ ಕಾಲ.

ಸರಿ. ಆತನು ಬರುವ ವೇಳೆಯನ್ನೇ ಕಾದು ರೈಲು ನಿಲ್ಲುವ ಹೊತ್ತಿಗೆ ಅಲ್ಲಿಯೇ ಹಾಜರಾದೆ. ಹೆಸರಿಗೆ ತಕ್ಕಂತೆ ಆರಡಿ ಎತ್ತರದ ಆಸಾಮಿಯನ್ನೇ ಹುಡುಕಹತ್ತಿದೆ. ಮನಸ್ಸಿನಲ್ಲಿಯೇ ಆತನನ್ನು ಸೃಷ್ಟಿಸಿದೆ. ಎತ್ತರವಾದ ಆಳು. ತುಂಬು ಮೀಸೆ. ಭಾರೀ ಜರದ ವಾರೆ ರುಮ್ಮಾಲು, ಹುಬ್ಬುಹಾರಿಸುವ ಒಂದು ಗುಣ. ಎಲೆಡಿಕೆ ರಂಗಿನ ಕೆಂಪುಟಿ, ಇತ್ಯಾದಿ. ನೋಡಿದೆ, ನೋಡಿದೆ, ಗದುಗಿನ ಕೋರೆ ರುಮ್ಮಾಲು ಕಣ್ಣಿಗೆ ಬೀಳಲೇ ಇಲ್ಲ.

ಅಷ್ಟರಲ್ಲೇ ಗಾಂಧೀಟೋಪಿ ಹಾಕಿದ ಕುಳ್ಳನೊಬ್ಬನು ನನ್ನನ್ನೇ ನೋಡತೊಡಗಿದನು. ಒಮ್ಮೆಲೇ ನನ್ನ ಹತ್ತಿರಕ್ಕೆ ಬಂದನು ನೀವೆ ಅಲ್ಲವೆ ಶ್ರೀ........ರಾಯರು ಎಂದು. ಹೌದು ಎನ್ನುವ ಮೊದಲೇ ಎರಡೂ ಕೈಗಳಿಂದ ನನ್ನನ್ನು ಬಾಚಿ ತಬ್ಬಿಕೊಂಡನು. ಬೆಂಗಳೂರಿನವರೆಲ್ಲರೂ ಅಪ್ರತಿಮ ಆದರಮಾಡುವರೆಂದನು. ತನ್ನ ಸಾಮಾನೆಲ್ಲವನ್ನೂ ಪೋರ್ಟರನು ಅಲ್ಲಿಯೇ ಇಟ್ಟಿರುವನೆಂದನು. ತಾನು ಹೋಗಿ ಮದ್ರಾಸುಗಾಡಿಯಲ್ಲಿ ಆಗಲೇ ಕೂಡುವೆನೆಂದನು. ನಾನು ಹೋಗಿ ಒಂದೆರಡು ಇಡ್ಲಿ ಒಂದು ಬಟ್ಟಲು ಕಾಫಿ ತರಿಸಿಕೊಟ್ಟರೆ ಆದೀತೆಂದನು. ನಾನೂ ಆಗಲೆಂದು ಫಲಹಾರ ಮಂದಿರದ ಕಡೆಗೆ ಹೊರಟೆ.

ಫಲಹಾರ ಮಂದಿರದಲ್ಲಿ ಗುಂಪೋ ಗುಂಪು, ಗಲಾಟೆಯೋ ಗಲಾಟೆ. ಹಾಗಾಗಿ ಎರಡು ಇಡ್ಲಿ ತರುವ ಹೊತ್ತಿಗೆ ಸ್ವಲ್ಪ ವೇಳೆಯಾಗಿತ್ತು. ಹಿಂತಿರುಗಿ ಬಂದು ನೋಡಿದರೆ ಗದುಗಿನ ಅದೃಶ್ಯಗೈರುಹಾಜರು. ಇಡ್ಲಿ ಕೈಲಿ ಹಿಡಿದುಕೊಂಡು ಮದ್ರಾಸು ರೈಲೆಲ್ಲವನ್ನೂ ಹುಡುಕಿದೆ. ಎಲ್ಲೂ ಇಲ್ಲ. ಆವೇಳೆಗೆ ಯಾವುದೋ ರೈಲು ಕೂಗಿತು. ಅಷ್ಟರಲ್ಲೇನಾದರೂ

ತಪ್ಪಿ ಹೋಗಿದ್ದಾನೋ ಎಂದು ಅಲ್ಲಿಗೆ ಹೋದೆ. ಮೈಸೂರು ರೈಲು ಹೊರಡುವ ಮುನ್ನ ಹೊಡೆಯುತ್ತಿತ್ತು. ಕಡೆಯ ಗಾಡಿಯ ಕಿಟಕಿಯಾಚೆ ಅರ್ಧ ದೇಹವನ್ನು ಹೊರ ಹಾಕಿಕೊಂಡು ಪೋರ್ಟರನೊಡನೆ ಹಿಂದೂಭಾಷೆಯಲ್ಲಿ ವೀರನಾರಾಯಣನು ಜಗಳ ಕಾಯುತ್ತಿದ್ದನು. ಸಿಕ್ಕಾಪಟ್ಟೆ ಜಗಳಕಾಯುತ್ತಿದ್ದನು. ನನ್ನನ್ನು ನೋಡಿ "ಬನ್ನೀ ರಾಯರೇ ಈ ಪೋರ್ಟರನಿಗೆ ಏನು ಕೊಡಬೇಕು, ನಾನು ಕೊಟ್ಟ ರೊಕ್ಕ ಸಾಲದಂತೆ. ಹಾಳು ರಂ....ಮಗ ಸಾಮಾನು ತರಲು ಇಷ್ಟು ಕಾಳಜಿ ಮಾಡಿದ, ರೈಲೇ ತಪ್ಪಿಸುತ್ತಿದ್ದ", ಇತ್ಯಾದಿ.

ಆಗ ನೋಡಿ ನಾನೊಂದು ಹಲ್ಕ ಕೆಲಸ ಮಾಡಿದೆ. ಕರ್ನಾಟಕದ ಏಕೀಕರಣ ಕ್ಕಾಗಿ ಕಂಕಣತೊಟ್ಟು ದುಡಿಯುತ್ತಿರುವವರೆಲ್ಲರೂ ನನ್ನನ್ನು ಆಕ್ಷೇಪಿಸದೆ ಬಿಡರು. ಕನ್ನಡಮ್ಮನ ಕುಟುಂಬದವರೆಲ್ಲರೂ, ಗೃಹಛಿದ್ರ ಮಾಡಿದೆನೆಂಬ ಆರೋಪಣೆಯನ್ನು ನನ್ನ ಮೇಲೆ ಹೊರಿಸದೆ ಇರರು, ಕನ್ನಡ ಬಾವುಟಕ್ಕೆ ಕಳಂಕ ತಂದೆನೆಂಬ ಅಪವಾದವು ನನ್ನನ್ನು ತಪ್ಪಿದ್ದಲ್ಲ. ಆದರೂ ಹೇಳಿಯೇಬಿಡುತ್ತೇನೆ. ತಪ್ಪು ರೈಲಿನಲ್ಲಿ ಕುಳಿತು ಸುರಕ್ಷಿತವಾಗಿ ತಪ್ಪು ಊರಿಗೆ ಹೋಗುತ್ತಿದ್ದ ವೀರನಾರಾಯಣನನ್ನು ಇಳಿಸಿ, ಈ ಬೆಂಗಳೂರಿನ, ಮಾರಿಕುಲಸಂಭೂತನಂತಿರುವ ಈ ಪೋರ್ಟರನ ಕೈಲಿ ಬಿಡಲೇ, ಅಥವಾ, ನಾನೂ ವೀರನಾರಾಯಣನನ್ನು ನನ್ನ ಪರವಾಗಿಟ್ಟುಕೊಂಡು ಆ ಪೋರ್ಟರನ ಕೈಲಿ ಕಾದಾಡಲೇ, ಈ ಊರಿನ ಪೋರ್ಟರರೇನು ಸಾಧಾರಣರಲ್ಲ. ರೈಲು ರೈಲುಮೇಲೆ ಬೀಳುವಂತ ಸನ್ನಾಹ ಮಾಡುವರು, ಧೂಮಶಕಟವು ನಿಟ್ಟುಸಿರು ಬಿಡುವಂತೆ ಗೈಯು ವರು, ನೀಲಿ ಷರ್ಟನು ತೊಟ್ಟು, ಕೆಂಪು ಬಾವುಟ ತೋರಿ, ಹಾರಿಬರುತಿರುವ ಗಾಡಿ ಗಳನು ಕೂಡ ಒಂದೇ ಸಿಳ್ಳಿನಿಂದ ನಿಲ್ಲಿಸಿಬಿಡುವ ಸಾಹಸಿಗಳು, ಟ್ರಂಕು ಟ್ರಂಕುಗಳನ್ನು ಕಣ್ಣಿಗೆ ಕಾಣದಂತೆ ಖರಿದು ಮಾಡುವವರು, ನೂರು ಸೇರು ಅಕ್ಕಿ ತುಂಬಿದ ಮೂಟೆ ಯನ್ನು, ಅದೇ ತೂಕವಿರುವಂತೆ ಕಲ್ಲು ತೌಡುಗಳಿಂದ ತುಂಬುವವರು. ಸಾಹಸಿಗಳು. ಇವರನ್ನು ನಾನೇಕೆ ಎದುರುಹಾಕಿಕೊಳ್ಳಲಿ, ಎದುರು ಹಾಕಿದರೆ ನನ್ನ ಜೀವಮಾನವು ಶಾಶ್ವತವೇ ಹಾಗೂ ವೀರನಾರಾಯಣನು ಸುರಕ್ಷಿತವೇ.

ಈ ಆಂದೋಳನದಲ್ಲಿದ್ದಾಗಲೇ ಮೈಸೂರು ರೈಲು ಹೊರಟೇಬಿಟ್ಟಿತು. ಇಳಿ ಜಾರಾದ ಹಾದಿಯಾದ್ದರಿಂದ ಆ ರೈಲೂ ಬೇಗಬೇಗನೆ ಸರಿದುಹೋಯಿತು. ನೋಡು ತ್ತಿದ್ದಂತೆಯೇ ಕಡೆಯ ಗಾಡಿಯೂ ಅದೃಶ್ಯವಾಯಿತು.

ಆ ವೇಳೆಗೆ ಪೋರ್ಟರನು ನನ್ನ ಹತ್ತಿರವೇ ಬಂದನು. ನನಗೇನಾದರೂ ತಗಲಿ ಕೊಳ್ಳುತ್ತಾನೆಯೋ ಎಂದು ಶಂಕೆಪಡುವಷ್ಟರಲ್ಲೇ, ಆತನು ಸಹೋದ್ಯೋಗಿಗಂದನು: 'ಪಾತಿಜಾ ಅವನೇ, ನಾಲು ಪೊಟ್ಟಿ ಅದುತು ಪೋಟಾಲೂ, ಮೂಣೇ ಅಣ ಕುಡು ಕರಾ, ಎನ್ನ ಪೋಚು ಪೋ, ಅದಿಚಿಟ್ಟೆ ಅವನ ಪೇನಾವೇ ಒರ್ರೊ ಹಾಯಾವ್ದಾ ಆಪ್ಪದುರ್', ಇತ್ಯಾದಿ.

ನಾನೇನೂ ಅವರ ಸಂಭಾಷಣೆಗಳಲ್ಲಿ ಪ್ರವೇಶಿಸಲಿಲ್ಲ. ಈ ನಾರಿಯ ನಾಡ ಹಬ್ಬವನ್ನು ನಮ್ಮೂರಿನ ಪರಿಸತ್ತಿನಲ್ಲೇ ನಡೆಸೋಣವೆಂದು ತೀರ್ಮಾನಿಸಿದ್ದೇನೆ.

---

# ಹಲಬರ ಜೀವನದಲ್ಲಿನ ಒಂದು ದಿನ

[ ಅವರವರು ಬರೆದ ಪತ್ರಗಳ ಸಾರಾಂಶದಿಂದ ]

## ಅತ್ತೆಮನೆ ಸೊಸೆ

(ನಮ್ಮ ನೆರೆಯವಳು)

ಕೋಳಿ ಕೂಗುವ ಮೊದಲೇ ನಾನೆದ್ದು ಬಚ್ಚಲಮನೆಯ ಹಂಡೆಗೆ ನೀರು ತುಂಬಿ, ಒಲೆಗೆ ಬೆಂಕಿ ಹಚ್ಚಲು ಶುರು ಮಾಡುತ್ತೇನೆ. ಎಲ್ಲೆಲ್ಲೂ ನಿಶ್ಶಬ್ದ. ವಠಾರದಲ್ಲಿ ಗೊರಕೆ ಹುಯ್ಯುವುದು ಇನ್ನೂ ಕೇಳಿಬರುತ್ತಿರುತ್ತದೆ. ಆಗ ಮೆಲ್ಲಗೆ ಯಾರಿಗೂ ಕೇಳಿಸದಂತೆ ಉದಯರಾಗವನ್ನು ಹಾಡುತ್ತಾ ನನ್ನ ಮನೆಗೆಲಸ ಆರಂಭಿಸುತ್ತೇನೆ.

ಸುತ್ತಲೂ ಇನ್ನೂ ತಂಗಾಳಿಯು ಬೀಸುತ್ತಿದೆ. ಅಲ್ಲಲ್ಲೇ ನಕ್ಷತ್ರಗಳು ಇಣಿಕಿಣಿಕಿ ನೋಡುತ್ತಿವೆ. ನನಗೂ ಇವುಗಳಂತೆಯೇ ಸ್ವಾತಂತ್ರವಿದ್ದು ಆಕಾಶದಲ್ಲಿ ಮೆರೆಯುವಂತಾದರೆ? ನಕ್ಷತ್ರಗಳಂತಿರುವ ಬೆಂಡೋಲೆಯಾದರೂ ಸಿಕ್ಕರೆ? ಕಡೆಗೆ ನೆರೆಮನೆಯಾಕೆಗೂ ಈ ಬೆಂಡೋಲೆಯು ಸಿಗದೆ ಇದ್ದರೆ? ಏನಿಲ್ಲದಿದ್ದರೂ ವಯಸ್ಸಾಗಿ ನನ್ನ ಸೊಸೆಯು ಬಚ್ಚಲಮನೆ ಪಾರುಪತ್ಯ ವಹಿಸಿಕೊಂಡರೆ? ಅತ್ತೆಯ ಬೈಗಳು ತಪ್ಪಿದರೆ?

ಅಯ್ಯೋ! ಹಾಳು ಒಲೆಯು ಆರಿಹೋಯಿತು. ಈ ಯೋಚನಾತರಂಗಗಳಲ್ಲೇ ಸುಳಿಯುತ್ತಿದ್ದ ನನಗೆ ಒಲೆಯ ನೆನಪೇ ಮರೆತುಹೋಯಿತು. ಇನ್ನೇನು ಅತ್ತೆಮ್ಮನವರು ಏಳುವ ಹೊತ್ತಾಯಿತು. ನೀರು ಕಾದಿರದಿದ್ದರೆ ಬೈಗಳು ಸಿದ್ಧ. ಏನು ಮಾಡಲಿ, ಈ ಸೀಮೆ ಎಣ್ಣೆ ಇನ್ನಷ್ಟು ಚೆಲ್ಲಿಬಿಟ್ಟೇ ಒಲೆ ಹತ್ತಿಸುತ್ತೇನೆ. ಶೀಷೆ ಅವರಿಗೆ ಕಾಣದಂತೆ ಬಚ್ಚಿಟ್ಟರಾಯಿತು....

## ಅಗಸರವನು

ಮುಂಜಾನೆ ಎದ್ದು ಹಳಿಯ ಬಟ್ಟೆಗಳನ್ನೆಲ್ಲಾ ಗಂಟು ಕಟ್ಟಿ ನದಿಯ ಬಳಿಗೆ ಹೋಗುತ್ತೇನೆ. ಅಲ್ಲಿ ಎಲ್ಲ ಬಟ್ಟೆಗಳನ್ನೂ ಸಾವಧಾನವಾಗಿ ಹರಿಯದಂತೆ ಒಗೆದು, ಕೊಳೆಯಾಗದಂತೆ ಹರವಿ ಮಧ್ಯಾಹ್ನ ಒಣಗಿದಮೇಲೆ ಮನೆಗೆ ತೆಗೆದುಕೊಂಡು ಹೋಗುತ್ತೇನೆ. ಊಟಮಾಡಿದ ತರುವಾಯ ನಗುನಗುತಾ ಇಸ್ತ್ರಿ ಮಾಡಿ ಸಾಯಂಕಾಲದ ವೇಳೆಗೆ ಗೊತ್ತಾದ ದಿನಕ್ಕಿಂತ ಒಂದು ದಿನ ಮುಂಚೆಯೇ ರಾಯರ ಮನೆಗೆ ತೆಗೆದುಕೊಂಡು ಹೋಗಿ ಕೊಡುತ್ತೇನೆ. ರಾಯರಾದರೂ ಶುಭ್ರವಾದ, ಹರಿಯದಿದ್ದ ತಮ್ಮ ಬಟ್ಟೆಗಳು ಕಾಲಕ್ಕೆ ಮುಂಚೆಯೇ ಬಂದಿದ್ದನ್ನು ಕಂಡು ಬಹಳ ಸಂತೋಷಪಟ್ಟುಕೊಂಡು ವಿಶ್ವಾಸದಿಂದ ಮಾತನಾಡಿಸಿ ಕೈತುಂಬ ಹಣವನ್ನು ಕೊಡುತ್ತಾರೆ.

ಹಣವನ್ನೆಲ್ಲಾ ಮನೆಗೆ ನೇರವಾಗಿ ತಂದು, ಒಂದು ಕಾಸನ್ನೂ ನೀರುನೊರೆಗಳ ಪಾಲುಮಾಡದೆ, ಹೆಂಡತಿಯ ಕೈಯಲ್ಲಿ ಕೊಟ್ಟು ದೇವರಭಜನೆ ಮಾಡುತ್ತಾ ಕಾಲ ಕಳೆಯುತ್ತೇನೆ.

ಇತ್ಯಾದಿ, ಇತ್ಯಾದಿ. ಕಟ್ಟುಕತೆ ಸಾಗುತ್ತದೆ.

## ಸರ್ಕಾರೀ ಉದ್ಯೋಗದಾರ

(ನವೀನ ಕಾಲೇಕ)

ಉಷಃಕಾಲದೊಳಿದ್ದು, ಪ್ರಾತಸ್ಸಂಧ್ಯಾವಂದನೆಯನ್ನು ಮಾಡಿ ನಂತರ ಉಪಹಾರವನ್ನುಂಡು ಬೇಗ್ಗ ಮನೆಯ ಮುಂದು

ಗರಿಗೆ ಸ್ವಲ್ಪಕಾಲ ಪಾಠಹೇಳಿ ಹನ್ನೊಂದು ಗಂಟೆಯ ವೇಳೆಗೆ ಊಟ ಮುಗಿಸಿಕೊಂಡು ಹೊತ್ತಿಗೆ ಸರಿಯಾಗಿ ಕಛೇರಿಗೆ ಹೋಗುತ್ತೇನೆ. ಸ್ವಲ್ಪಕಾಲ ವಿಳಂಬವಾದರೂ, ನನಗಾಗಿ ನೂರಾರು ಖಾಸಗೀ ಜನರು ಕಛೇರಿಯಲ್ಲಿ ಕಾದಿರುತ್ತಾರಾದ್ದರಿಂದ ನಾನೆಂದೂ ವೇಳೆಮಾಡಿಕೊಂಡು ಹೋಗುವುದೇ ಇಲ್ಲ. ಅಲ್ಲಿಯಾದರೂ ನಗುನಗುತ ಬಂದವರನ್ನು ಬರಮಾಡಿಕೊಂಡು ಅವರ ಕೆಲಸಗಳನ್ನೆಲ್ಲಾ ಮಾಡಿಕೊಟ್ಟು ಅವರಿಂದ ಪ್ರಯೋಜನಾಪೇಕ್ಷಿಸದೆ, ಜನಸೇವೆಯೇ ಈಶಸೇವೆಯೆಂದೆನುತ ನನ್ನ ಕಛೇರಿ ಕೆಲಸವನ್ನು ನೋಡುತ್ತೇನೆ. ಪಾಪ! ಬಡಗುಮಾಸ್ತರುಗಳು ಹಗಲೆಲ್ಲಾ ದುಡಿಯುತ್ತಾರಾದ್ದರಿಂದ ಅವರ ಮನಸ್ಸನ್ನು ನೋಯಿಸದೆ, ಅವರಿಗೆ ತ್ರಾಸು ಮಾಡದೆ, ಆ ದಿನದ ಕೆಲಸವನ್ನೆಲ್ಲಾ ನಾನೇ ಮುಗಿಸಿ ನಂತರ ಮನೆಗೆ ಹಿಂತಿರುಗುತ್ತೇನೆ. ಮನೆಗೆ ಬೇಕಾದ ಕಾಯಿಪಲ್ಯಗಳನ್ನೆಲ್ಲಾ, ಗುಮಾಸ್ತನಿಗೆ ಹೇಳದೆ ನಾನೇ ತರುತ್ತೇನೆ. ಯಾರಿಗೂ ಜುಲ್ಮಾನೆ ಹಾಕವುದಿಲ್ಲ, ಕೋಪಿಸಿಕೊಳ್ಳುವುದಿಲ್ಲ, ಕೆಟ್ಟದ್ದನ್ನು ಯೋಚಿಸುವುದೂ ಇಲ್ಲ. ಇತಿ.

## ಹಾಸ್ಯಪತ್ರಿಕೆಯ ಸಂಪಾದಕ

ಪ್ರಕಟನೆಗಾಗಿ ಬಂದ ಲೇಖನಗಳನ್ನು ನೋಡಲು ಕುಳಿತಾಗಲೇ ನನ್ನ ದಿನವು ದಿಟವಾಗಿಯೂ ಆರಂಭವಾದಂತೆ. ಎದುರಿಗೆ ತೆಕ್ಕೆತೆಕ್ಕೆ ಲೇಖನಗಳು, ವಿವಿಧ ಮನಮೋಹಕ ಅಣಕುವಾಡುಗಳು, ಸ್ಫೂರ್ತಿಯುತ ಹಾಸ್ಯಚಟಾಕಿಗಳು, ಕಣ್ಣಮುಂದೆ ಕುಣಿದಾಡುತ್ತವೆ.

ಸಂತೋಷದಿಂದ ನನ್ನ ಕೆಲಸಕ್ಕೆ ಕೈ ಹಾಕುತ್ತೇನೆ.

(ಯಾರೋ ನಿನಗೆ ಹೇಳಿದವರು ?—ಸಂ.)

---

ಬಟ್ಟೆ ತಲೆಗೆ ಕಾರಣಗಳಲ್ಲಿ ತುಂಬಾ ಯೋಚನೆ ಮಾಡುವುದು, ನಿದ್ರೆಗೆಡುವುದು ಇವುಗಳೆಲ್ಲವೂ ಕಾರಣಗಳಂತೆ.

—ಇವೆಲ್ಲಕ್ಕಿಂತಲೂ ಈ ಲೇಖನಗಳನ್ನು ಓದುವುದು ಮುಖ್ಯ ಕಾರಣವಲ್ಲವೇ ?

* * * *

ಯುದ್ಧಕ್ಕೆ ಮುಂಚೆ ೨ ಸಾವಿರ ಜನಕ್ಕೊಂದು ಮೋಟಾರು ಕಾರಿತ್ತು. ಈಗ **ಸಾವಿರ** ಜನಕ್ಕೊಂದರಂತಿದೆ ಎಂದು ಶಿರೋನಾಮೆ.

—ಅಂದರೆ ಈ ಅಂತರದಲ್ಲಿ, ಸಾವಿರ ಜನ ಮೋಟಾರಿಂದ ಮೋಕ್ಷ ಹೊಂದಿದರೇ ?

* * * *

ತುರ್ಕಿ ನಿಯೋಗಗೋಷ್ಠಿಯವರು ಭಾರತಕ್ಕೆ ಬಂದಿದ್ದಾರಂತೆ.

—ಆದರೆ ತುರ್ಕಿಸ್ಥಾನದ ಮಾತಿನ್ನೂ ಬಂದಿಲ್ಲವೆಂದು ತಿಳಿಯಬಂದಿದೆ.

* * * *

ಟೋಕಿಯೋನಲ್ಲಿ ಜಪಾನಿ ಮಿಲಿಟರಿ ಸಮ್ಮೇಳನ.

—ಏಕೆ ಜಪಾನಿನಲ್ಲಿ ಸ್ಥಳವಿರಲಿಲ್ಲವೇ ?

# ಕನ್ನಡದ ಮೀಮಾಂಸೆ

ಲೇಖಕ : ಶ್ರೀ ಶಿವರಾಮ ಕಾರಂತ

ನಮ್ಮ ನಾಡು, ನುಡಿ, ಜನಗಳು ಯಾವುದೇ ಬಗೆಯ ಮೀಮಾಂಸೆಗೆ ಅತೀತವಾದುವೆಂದು ಹೇಳಬೇಕಿಲ್ಲ. ಆದರೂ ಉಪನ್ಯಾಸ ಪ್ರಾರಂಭದಲ್ಲಿ, ಉಪನ್ಯಾಸಕರು ಬಲ್ಲವರಾದರೂ, ಅವರ ಪರಿಚಿತಿಯನ್ನು ಬಲ್ಲವರಿಗೇನೆ ಮಾಡಿಕೊಡುವ ಪ್ರಾಚೀನ ಪದ್ಧತಿಯಂತೆ, ನಾನಾದರೂ ನಮ್ಮ ನಾಡಿನ ಮೀಮಾಂಸೆಗೆ ತೊಡಗಿದ್ದೇನೆ. ಈ ಮೀಮಾಂಸೆಯ ಜರೂರಿ ಈಗಿಲ್ಲ; ಹಿಂದೊಮ್ಮೆ ಇದ್ದಿತು. ಎಲ್ಲವನ್ನೂ ಸಾವಧಾನಿಸಿ ತಿಳಿಯುವುದರಲ್ಲಿ ಜಾಣ್ಮೆಯಿದೆಯೆಂದು ಕರ್ಣಾಟಕ, ಕರ್ನಾಟಕಗಳ ವಾದವೆದ್ದು ಅಡಗಿಹೋದಮೇಲೆಯೇ, ನಾನು ಆ ಜ್ಞಾನತೃಷೆಯನ್ನು ಸಾವಕಾಶವಾಗಿ ತಣಿಸಲು ಎಳಸುತ್ತೇನೆ.

ನಮ್ಮ ನಾಡು ಯಾವ ತೆರನ 'ನಾಟಕ'ಕ್ಕೂ ಬಲಿಯಾಗಲು ಕಾರಣವಿರಲಿಲ್ಲ. ನಾಟಕವು ಸಂಸ್ಕೃತ ಜನರ ಪಾಲಿನದು. ನಮ್ಮ ಊರು ನಮಗೆ ನಾಟಕದಂತೆ ಕಾಣಿಸದು, ವಾಸ್ತವಿಕವಾದ ನಾಡು ಅದು ನಮಗೆ. ಅದು ಕರ್‍-ನಾಡೋ, ಕರು-ನಾಡೋ, ಕರೆ-ನಾಡೋ, ಕರಿ-ನಾಡೋ ಎಂದು ಅನುಮಾನಿಸಿದವರಿಗೆ ಒಂದೇ ಉತ್ತರವಿದೆ. ಕರಿದಾದ ನಮ್ಮ ನಾಡು ಅವೆಲ್ಲವೂ ಆಗಿದೆ. ಕಡಲಕರೆಯಲ್ಲಿರುವ ನಮ್ಮ ನಾಡು ಕರೆ-ನಾಡು, ಕೋಣನ ಕರುಗಳಿಗೆ ಹೆಸರಾದ ನಮ್ಮ ನಾಡು ಕರು-ನಾಡು, ಕರಿ ನೆಲಕ್ಕೆ ಹೆಸರಾದ ನಮ್ಮ ನಾಡು ಕರಿ-ನಾಡು, ಅದರಂತೆ ಕರಿ-ಎಂಬ ಕಾಡಾನೆಗೂ ಹೆಸರಾದ ನಾಡು. ಇದು ಕನ್ನಡ, ಕನ್ನಾಡುಗಳ ಮೂಲ ರೂಪ. ಇದನ್ನು ಅಲ್ಲಗಳೆಯಲು 'ನಾಟಕ' ಒಂದನ್ನು ಹಿಡಿದು ತರಬೇಕೆ ? ಬಲ್ಲವರು ಸೇರಿ ಅದನ್ನು ಆಡಿ ತೋರಿಸಬೇಕೆ ?

ಈ ನಾಡಿನ ವೈಶಿಷ್ಟ್ಯವೇನು ? ಹೀಗೆಂದರೆ ತಿರುಗಿ ಅದರ ಹೆಸರಿನ ಪೂರ್ವಾರ್ಧವೇ ಸೂಚನೆಯನ್ನು ಕೊಡಬೇಕಾಗುತ್ತದೆ. ಕರೆ, ಕರಿ, ಕರು ಪದಗಳೇ—ಅವುಗಳು. ನಮ್ಮ ನಾಡಿನ ಕಾಲನ್ನು ತೊಳೆಸಲು ಕೂಡಲೆ ರಾಮನೇ ಕಡಲನ್ನು 'ಕರೆ'ದನು. ಮಹಿಷಾದು-ನಮ್ಮ ನಾಡಿನ 'ಕರು'ವನ್ನು ಕೊಟ್ಟಿತು. ಉಳಿದ 'ಕರಿ' ಪದವು ಬರಿಯ ಕರಿ ನೆಲವನ್ನು ಸೂಚಿಸುವ ಮಾತಷ್ಟೆ. ನಮ್ಮ ನಾಡಿನ ಆತ್ಮವೇ ಅದು. ಜೀವಾಳವೇ ಅದು.

ನಮ್ಮ ನಾಡು ಎಲ್ಲ ಬಗೆಯ 'ಕರಿ' ತನಕ್ಕೂ ಹಿರಿದಾದುದು. ಹಿರಿದಾದ ಪ್ರಾಣಿ 'ಕರಿ'. ಅದು ಕನ್ನಡದ ಮಲೆನಾಡಿನ ದೊರೆ. ಇನ್ನು ನಾಡಿನ ಬಣ್ಣದ ಸಿರಿಯೋ 'ಕರಿ'ಯದು. ದಕ್ಷಿಣದ ಎರೆನೆಲವು ಕರಿಯದು, ನಾಡಿನ ಚೆಲುವೆಯರು 'ಕರಿ'ಯರು. ನಾಡಿನ ಪ್ರಸಿದ್ಧ ಗಾಯಕರಾದ ಕಾಗೆ, ಕೋಗಿಲೆಯರು 'ಕರಿ'ಯವು.

ಕನ್ನಡ ದೇಶದ ಸುಸಂಸ್ಕೃತವಾದ ಪಕ್ಷಿಯೇ ಕರಿದಾದ 'ಕಾಗೆ'. ಅದಕ್ಕೆಂದೇ ಶ್ರೀಮಾನ್ ಬೇಂದ್ರೆಯವರು "ಅ-ಕಾಗಿ, ಯಾ-ಕಾಗಿ, ಬೇ-ಕಾಗಿ ಕುಣಿತದೆ" ಎಂದರು. ಆ ಕಾಗಿಯೂ ಯಾವ ಕಾಗಿಯೂ ಸೇರಿದರೆ ಬೇ- (=ಎರಡು) ಕಾಗಿ ಕುಣಿಯುತ್ತದೆ ಎಂಬ ಒಂದು ಒಂದು ಸೇರಿ ಎರಡಾಗುವುದೆಂಬ ಅನನ್ಯ ಸತ್ಯವನ್ನು ಅವರು ಸಾರಿದರು. ಕನಕದಾಸರು ತಮ್ಮ ಹೆಸರಿನಲ್ಲಿ 'ಹೊನ್ನಿ'ನ (=ಕನಕ) ವ್ಯಾಮೋಹ ತಾಳಿದರು. ಅವರು ಶರಣು ಹೋದುದು ಯಾರಿಗೆ ? ಕರಿದಾದ 'ಕೇಶ'ವಗೆ. ಅದು ಎಂಥ ಕೇಶವನವನು ? ಕಾಗೆಗಳಿಗೆ ನಾಚಿಸುವಂತೆ ಕಾಣಿಸುವ ಕಾಗಿನೆಲೆಕೇಶವನು. ಹೀಗಿರಲು ದೇವರಲ್ಲೂ ದಾಸರಲ್ಲೂ ನಮ್ಮೂರ 'ಕಾಗಿ'ಯು ಏಕಸಮಾನವಾದ ಪ್ರಾಮುಖ್ಯತೆಯನ್ನು ಹೊಂದಲಿಲ್ಲವೇ. ನಿಜಕ್ಕೂ 'ಕರಿ'ತನಕ್ಕೆ ಕುರುಹಾದ 'ಕಾಗೆ'ಯೇ ನಮ್ಮ ನಾಡಿನ ಸಂಕೇತವಾಗಬೇಕು. ಹೀಗಿರಲು ವೈಯಾಕರಣರು ಗಂಡಬೇರುಂಡವನ್ನು ಏತಕ್ಕೆ ಆರಿಸಿಕೊಂಡರೋ ತಿಳಿಯದಾಗಿದೆ.

ನಮ್ಮ ಕಾಗೆಯು ಕರ್, ಕರ್ ಎಂಬ ಕರೆಯು, 'ಅಕ್ಕರೆ'ಯ ಕೂಗು ಹೊರಗಿಂದ ಬಂದವರಿಗೆ ಆಟವಾಗಿ ಕೇಳಿಸಿತೋ, ನಾಟಕವಾಗಿ ಕಾಣಿಸಿತೋ–ಅದರಿಂದ ಕರ್ನಾಟಕ–ಎಂದು ಅವರು ತಪ್ಪಾಗಿ ನಾಡನ್ನೆ ಕರೆದುದರಲ್ಲಿ ಅಚ್ಚರಿಯಿಲ್ಲ.

ನಮ್ಮ ನಾಡಿಗೆ ಪಕ್ಷಿ ಶ್ರೇಷ್ಠವಾದುದು ಕಾಗೆಯೇ. ಅದೂ ಕರಿದಾದ ಕಾಗೆಯೇ–ಎಂಬುದು ಸುಸ್ಪಷ್ಟವಾಯಿತಷ್ಟೆ. ಅನಂತರ ಪ್ರಾಣಿಶ್ರೇಷ್ಠವಾವುದು? ಸ್ವಯಂ ವಿದಿತವಾಗುವ 'ಕರಿ'='ಆನೆ' ನಮ್ಮ ದೇಶದ ಅರಮನೆ, ಗುರು ಮನೆಗಳಲ್ಲಿ, 'ಕರಿ'ಗಳಿಗೆ ಇಂದಿಗೂ ಆಶ್ರಯಸ್ಥಾನಗಳಾಗಿರುವುದನ್ನು ಕಂಡಲ್ಲಿ ಅದೇ ರಾಜಮೃಗವಾಗಿದೆ–ಎಂಬುದು ನಿರ್ವಿವಾದ.

ಇನ್ನು ಸಸ್ಯಗಳಲ್ಲಿ ಶ್ರೇಷ್ಠವೂ, ಹೆಸರಾದುದೂ ಯಾವುದೆಂದರೆ ಕೇಳಬೇಕೇ? 'ಕರಿ–ಮರ' (Ebony). ಇಂದಿಗೂ ಶ್ರೇಷ್ಠ ಮನ್ನಣೆಯು ಅದಕ್ಕೆ ದೊರೆಯುತ್ತಿದೆ.

ನಮ್ಮ ನಾಡಿನ ಉರಗಶ್ರೇಷ್ಠನೇ ಕಾಳಿಂಗ. ತಿರುಗಿ 'ಕರಿ' ಹಾವಿನದೇ ಮೇಲ್ಮೆ. ಇನ್ನು ನದನದಿಗಳ ವಿಚಾರ ಮಾಡುವ. ಕರಿದಾದ ನದಿಯೆನಿಸುವ ಕೃಷ್ಣೆಯನ್ನು ಎಷ್ಟು ಸಂಸ್ಕೃತಿಸಿದರೂ ಅವಳು 'ಕರಿ' ಹೊಳೆಯಾಗಿಯೇ ಗಣಿಸಲ್ಪಡಬೇಕಾದವಳು. ನಮ್ಮ ಉನ್ನತವಾದ ಬೆಟ್ಟವೂ ಸಹ ಕರಿಯದೇ. 'ನೀಲ'ವೆಂದು ಕರಿದನ್ನೆ ಕರೆದು ನೀಲಗಿರಿ ಮಾಡಿದರೇನು ಅಲ್ಲಿನ ದೊಡ್ಡ ಬೆಟ್ಟವು 'ಕರಿ ಬೆಟ್ಟವೇ'.

ಈ ರೀತಿಯಿಂದ ನೋಡಹೋದಲ್ಲಿ ನಮ್ಮ ನಾಡಿನ ಸಸ್ಯ, ನೆಲ, ಪ್ರಾಣಿಗಳೆಲ್ಲ 'ಕರಿ' ಭರಿತವಾದುವು. ಖನಿಜ ಸಂಪತ್ತಿನಲ್ಲಿಯೂ ಅದೇ ರಾಗವಿಲ್ಲವೇ. ಕರಿ ಹೊನ್ನೇ ನಮಗೆ ಮುಖ್ಯ. ಅದರಿಂದಲೇ ಅಂದು ಕಬ್ಬಿಣದ ಉತ್ಪನ್ನ ನಮ್ಮ ದೇಶದಲ್ಲಿ ಆಗಲಾಯಿತು.

ಇಂತಹ 'ಕರಿ'ಮಯ ನಾಡಿನಲ್ಲಿ ಯಾವ 'ಕುಲ' ಶ್ರೇಷ್ಠ–ಎಂದರೆ ಕೇಳಬೇಕೇ. ಸರ್ವತೋಮುಖವಾದ ಕರಿಮೆಯಿಂದ ಕೂಡಿದವರೇ ಅದು ಇರಬೇಕು. ಸ್ಥೂಲದಿಂದ ಗ್ರಹಿಸಿದಲ್ಲಿ 'ಕರಿ'ದಾದ ಚೆಲುವ ಜನರೇ (ಮಾದರೇ) ಆ ಕುಲದವರಾಗಬಹುದೆಂದು ತರ್ಕಿಸಬಹುದು. ಕಮ್ಮಾರರು (ಕರಿ-ಮಾರರು) ಎಂಬುವರು ಈ ಕಾರಣದಿಂದ ಶುದ್ಧ ಕನ್ನಡಿಗರೇ; ಶ್ರೇಷ್ಠ ಕನ್ನಡಿಗರೇ ಸರಿ. ಕರಿತನದಲ್ಲಿ ಪರಿಷ್ಕೃತೆಯನ್ನು ಹೊಂದುವುದೇ ಕ'ಮ್ಮೆ'ತನ, ಹೀಗಿರಲು 'ಕಮ್ಮೆ' ಪಂಗಡದವರು. ಆದುದರಿಂದ ನಮ್ಮ ನಾಡಿನಲ್ಲಿ ಮೂಲ ಶ್ರೇಷ್ಠವೂ ಶುದ್ಧವೂ ಆದ ಎರಡೇ ಕುಟುಂಬದವರೆಂದರೆ ಕಮ್ಮಾರರು, ಕಮ್ಮೆ ಜನರು, ಈ ಎರಡು ಕುಟುಂಬಗಳ ಹೊರತಾಗಿ, ನಮ್ಮ ನಾಡಿನ ಯಾವ ಶ್ರೇಷ್ಠ ವ್ಯಕ್ತಿಯೂ ಹುಟ್ಟಲು ಸಾಧ್ಯವಿಲ್ಲ ಎಂಬುದು ಪ್ರತಿಯೊಬ್ಬ ಮತಿವಂತನೂ ತಿಳಿಯಬಹುದಾದ ವಿಷಯ.

ನಮ್ಮ ನಾಡಿನ ಬಹುಮಂದಿ ಮೇಧಾವಿಗಳ ಕುಲಶೋಧನೆ ಮಾಡುವುದರಲ್ಲಿ ಹೆಸರಾದ ಶ್ರೀ ರಾಜಪುರೋಹಿತರು ನಮಗೆ ತುಂಬ ಸಹಾಯಮಾಡಿದ್ದಾರೆ. ಅವರು, ಈ ಶ್ರೇಷ್ಠ ವ್ಯಕ್ತಿಗಳಲ್ಲಿ ಎಲ್ಲರೂ ಕಾಣ್ವ ಶಾಖೆಯವರೆಂದು ನಿರ್ದಿಷ್ಟವಾಗಿ ಸಾಧಿಸಿದ್ದಾರೆ. ಅದನ್ನು ತಾವು ಒಪ್ಪಲೇಬೇಕು. ಒಪ್ಪಿದಲ್ಲಿ ನಮ್ಮ ಕೆಲಸ ಸುಲಭವಾಗುವುದು. ಅನಂತರ ಈ ಕಾಣ್ವನಾರು ಎಂಬ ಒಂದು ವಿಷಯವನ್ನು ತಿಳಿದರೆ ಸಾಕು. "ಕಮ್ಮೆತರೊಳಂ ಅಣ್ಣಂ"—ಅದನೇ ಅವನೆಂದು ಒಂದು ಈಗಾಗಲೇ ಸಿಗಬೇಕಾಗಿದ್ದ ಶಾಸನದಲ್ಲಿ ತಿಳಿಯಲಾಗುತ್ತದೆ. ಸದರಿ ಶಾಸನವು, ಯೋಗ್ಯ ಅಗೆತಮಾಡಿದಲ್ಲಿ ಮಹೇಂಜೋದಾರೋವಿನ ಆರನೇ ಸಂಸ್ತರದಲ್ಲಿ ಸಿಗಬೇಕು. ಕಮ್ಮೆ ಜನಾಂಗದಲ್ಲಿ ಗಂಡನಾದವನೇ ಕಾಣ್ವನಾಗಿರಲು ಅವನ ಕುಲದವರೆಲ್ಲ ಹೆಸರಾದ ವ್ಯಕ್ತಿಗಳೆನಿಸುವುದರಲ್ಲಿ ಏನ್ ಆಶ್ಚರ್ಯವು.

ಇನ್ನು ನಮ್ಮ ಪಾಲಿಗೆ ಉಳಿದ ಶೋಧೆಯೆಂಬುದು ಉಳಿದ ಕೆಲವೊಂದು ಶ್ರೇಷ್ಠ ವ್ಯಕ್ತಿಗಳ ವಿಚಾರ. ಶ್ರೀಮಾನ್ ಸರ್ ಎಂ. ವಿಶ್ವೇಶ್ವರಯ್ಯನವರು ಹೆಸರಾದ ಕಮ್ಮೆ ವಂಶದವರು. ಹಿಂದಿನಿಂದ ನಾವು ನೋಡಲು ಹಂಬಲಿಸಿದರೂ ಈ ತೀರ್ಮಾನವು ವಿದಿತವಾಗುವುದು. ಈ ವಿಷಯದಲ್ಲಿ ನಮಗೆ ತೊಡಕು ತರುವ ಒಂದು 'ಪದ'ವನ್ನು ಕುರಿತು ಪರ್ಯಾಲೋಚಿಸಬೇಕು. ಅದೇ ಕನ್ನಡದಲ್ಲಿ ಬರುವ 'ಪುಲಿ, ಹುಲಿ' ಎಂಬ ಮಾತು. ಪ್ರಾಣಿಶಾಸ್ತ್ರ ಬಲ್ಲವರಿಗೆ ಹುಲಿಯ ವಿಚಾರ ತಿಳಿದಿದೆ. ಅವುಗಳಲ್ಲಿ ಮೂರು ವರ್ಗಗಳಿವೆ. ಪಟ್ಟೆ ಹುಲಿ, ಚಿಟ್ಟೆ ಹುಲಿ, ಕರಿ ಹುಲಿ (Black Panther). ಈ ಮೂರನೆಯ ಜಾತಿಯ ಹುಲಿಯೋ ತೀರ ಅಪೂರ್ವದ್ದು. ತೀರ ರೌದ್ರ ಸ್ವಭಾವ. ಆದನ್ನೇ ಈಗಲೂ ಅಪೂರ್ವವಾಗಿ ಕನ್ನಡ ದೇಶದ ಕೆಲವು ಕಾಡುಗಳಲ್ಲಿ ಕಾಣಬಹುದು. (ಮೈಸೂರು ಮೃಗಾಲಯದಲ್ಲಿ ಒಂದು ಮಾದರಿಯಿದೆ.) ಕರಿನಾಡಿನ ಜನರ 'ಹುಲಿ', 'ಪುಲಿ' ಎಂಬ ಮಾತನ್ನು ಈ ಹುಲಿಗೆ ಅನ್ವಯಿಸಿರಬೇಕೇ ವಿನಃ ಸಿಕ್ಕಾಪಟ್ಟೆ ಹುಲಿಗೆ ಆ ಮಾತನ್ನು ಹೇಳಿರಲಾರರು. ಇದನ್ನು ಒಪ್ಪಿದಲ್ಲಿ 'ಪುಲಿಕೇಶಿ'ಯು 'ಕೇಶವರ್ಣದ ಹುಲಿ'ಯೆಂಬ ಬಿರುದಾಂಕಿತನು. ರನ್ನನ ತವರೂರಂತಿದ್ದ ಪುಲಿಕೆರೆಯು, ಪುಲಿಗೆರೆಯಲ್ಲ; ಪುಲಿಯ ಕೆರೆ ಅಥವ ಕರಿಪುಲಿಯ ಊರಾಗಿರಬೇಕು–ಎಂದು ತಿಳಿಯುವುದು. ಇದರಿಂದ ನಿಜವಾದ ಕನ್ನಡಿಗನಾದ ಪುಲಿಕೇಶಿಯು ಕಮ್ಮಾರನೋ, ಕಮ್ಮೆಯೋ ಆಗಿರಬೇಕೆಂದೂ, ಪುಲಿಗೆರೆಯು ಅವರದೇ ರಾಜಧಾನಿಯಾಗಿತ್ತೆಂದೂ ತೀರ್ಮಾನವಾಗಲಾರದೇ? ಕನ್ನಡ ನಾಡಿನಲ್ಲಿ ಇನ್ನೂ ಸಾಕಷ್ಟು ಭೂಗರ್ಭ ಶೋಧನೆಯಾಗಿಲ್ಲವೆಂದೇ ನಮ್ಮ ತರ್ಕಸರಣಿ, ನಿರ್ಧಾರಗಳನ್ನು ಅರ್ಧಕ್ಕೇನೆ ನಿಲ್ಲಿಸಬೇಕಾಗಿದೆ.

ಹಳೇಬೀಡು ಬೇಲೂರುಗಳ ಪ್ರಸಿದ್ಧ ಶಿಲ್ಪಿಯಾದ ಜಕ್ಕಣನು ಕಮ್ಮಾರನು ಎಂಬುದು ಸುಲಭ ತೀರ್ಮಾನದಾಯಕ ವಿಷಯ. ಅವನನ್ನು ವಿಶ್ವಕರ್ಮನೆಂದು ಆಗಿನ ಸಂಸ್ಕೃತದ ಜನರು ಒಪ್ಪಿದರು. ಈ 'ವಿಶ್ವಕರ್ಮ' ಎಂಬ ಮಾತು ಹೇಗೆ ಉಂಟಾಯಿತು, ಅದನ್ನು ತಿರುಗಿ ನಾವು ತಪ್ಪಿಸಿಸಿದಲ್ಲಿ ವಿಶ್ವಕರ್ಮ ಪದವು 'ಬಿಸಕಮ್ಮಾರ'–ಎಂದಾಗುವುದು. ಕಮ್ಮಾರರಲ್ಲಿನ ಶ್ರೇಷ್ಠನಾದೊಂದು ಪಂಗಡದವರು ತರತರದ ವಿಷಪ್ರಯೋಗದಿಂದ ಕಲ್ಲನ್ನು ಕರಗಿಸಿ, ಕೊರೆಯುವ ಗೊಂಬೆ ನಿರ್ಮಿಸುತ್ತಿದ್ದರಬೇಕೆಂದೂ, ಈತನು ಆ ವೃತ್ತಿಯವನೆಂದೂ ಹೊಳೆಯುವುದು. ಮದನ ಕೈಕೊಂಬೆಗಳಂತಹ ಚಲುವಿನ ಗೊಂಬೆಗಳನ್ನು ಚಾಣದಿಂದ ಕಡಿಯದೆ, ಹೀಗೆಯೆ ನಾಜೂಕಿನಿಂದ ಕರಗಿಸಿ ತೆಗೆದು ಮಾಡಿರಬೇಕೆಂದು ತರ್ಕಿಸಬಹುದು.

ನನ್ನೀ ಲೇಖನವನ್ನು ಓದಿದ ಜನರಲ್ಲಿ ಆ–ಕಮ್ಮಾರರೂ, ಆ–ಕಮ್ಮೆಗಳೂ ಇರಬಹುದು; ಅವರನ್ಯ ತನಗೆ ಅಂಥ ಹಿರಿಯ ಕುಲ ದೊರೆಯದೆ ಹೋಯಿತಲ್ಲ ಎಂದು ವ್ಯಥೆಯುಂಟಾಗಬಾರದೆಂದು ನಾನು ಈ ಲೇಖನವನ್ನು ಇಷ್ಟಕ್ಕೇನೆ ನಿಲ್ಲಿಸುತ್ತೇನೆ.



# ಕಲ್ಯಾಣಿ ಇವಳಿರಬಹುದೆ?

ಆ ವಾರವೆಲ್ಲ ನನಗೆ ಅಮಿತವಾದ ಆನಂದ! ಹೇಳಲಾರದ ಹೆಮ್ಮೆ! ಸರ್ವೇ ಜನಾಸ್ಸುಖಿನೋ ಭವಂತು, ಎಂಬ ಅನುಗ್ರಹ ಬುದ್ಧಿ! ಏಕೆ ಅಂತ ನೀವು ಕೇಳಿದರೆ, ನಾನೇನು ಹೇಳಲಿ? ನನ್ನ ಪತ್ನಿಯ ರೂಪ ಲಾವಣ್ಯಗಳನ್ನು ನೆನೆದು - ಅಂತೀರೋ, ಆಕೆಯ ಮದಗಜಗಮನ, ಸಿಂಹದಸೊಂಟ ಜಿಂಕೆಯ ಕಣ್ಣು ಇತ್ಯಾದಿಗಳಿಗಾಗಿ ಅಂತೀರೋ, ಆಕೆಯ ಸವಿಮಾತು ಸರುಗಂಪು ಇವುಗಳಿಗಾಗಿ ಅಂತೀರೋ,-ಶುದ್ಧ ಸುಳ್ಳು! ಏಕೆಂದರೆ, ನಾನಿನ್ನೂ ನನ್ನ ಕಲ್ಯಾಣಿಯನ್ನು ನೋಡೇ ಇರಲಿಲ್ಲ. ಆಕೆಯದು ಕಮಲವದನವೋ ಕೊರಕಲುವದನವೋ ಕಂಡವರಾರು? ಆಕೆ ತಾವರೆ ದಂಟಿನ ಹಾಗೆ ತೆಳ್ಳಗಿರುತ್ತಾಳೋ ನೇರಳೆಹಣ್ಣಿನ ಹಾಗೆ ಕುಳ್ಳಗಿರುತ್ತಾಳೋ ಬಲ್ಲವರಾರು? ಹಾಗಾದರೆ ನನ್ನ ಆನಂದಕ್ಕೆ ಮೂಲಭೂತವಾದದ್ದು ಮದುವೆಯಲ್ಲಿ ನನಗೆ ಸಿಗಲಿರುವ ನಶ್ಯದ ಬಣ್ಣದ ಅಂಗಿಯಿರಬಹುದೇ? ಇರಲಾರದು. ಏಕೆಂದರೆ ನನಗೂ ನಶ್ಯಕ್ಕೂ ಅನೇಕ ವರ್ಷಗಳಿಂದ ನಂಟತನ ಬೆಳೆದು ಬಂದಿದೆ. ಮತ್ತೇನಿರಬಹುದು? "ನನಗೆ ಮದುವೆ! ನನಗೆ ಮದುವೆ!"—ಎಂಬ ಒಂದೇ ಸಂಗತಿ ಮಾತ್ರ ನನಗೆ ಸಂತೋಷವನ್ನು ಉಕ್ಕಿಸುತ್ತಿತ್ತು.

"ಮದುವೆ!" ನಮ್ಮ ದೇಶದ ಹುಡುಗ ಹುಡುಗಿಯರಿಗೆ ಮದುವೆ ಎಂದರೆ ಮನದಲ್ಲಿ ಮೂಡಿ ಮಾಯವಾಗುವ ಮಧುರ ಭಾವ ತರಂಗಗಳು ಎಷ್ಟು? ಸುಖ ಶಾಂತಿ ಶುಶ್ರೂಷೆ ಪ್ರೀತಿ ಪಾತಿವ್ರತ್ಯ...."ಲೋ! ಇವಳನ್ನ ಮದುವೆಮಾಡಿಕೊಳ್ಳುತ್ತೀಯೇನೋ?" "ಲೇ! ನಿನ್ನ ಗಂಡ!" ಅಂತ ಹೇಳಿ ನೋಡಿ, ಅದೇನು ನಾಚಿಕೆ, ಅದೆಷ್ಟು ಲಜ್ಜೆ! ಮುಖವೆಲ್ಲ ಕೆಂಪಾಗಿ ತಲೆ ತಗ್ಗಿಸಿ ನೆಲ ಕೆರೆದು ನಿಂತುಬಿಡುತ್ತಾರೆ ಭಾರತದ ತರುಣ ತರುಣಿಯರು! ಆ ನೋಟದ ಸೊಬಗನ್ನು ಸವಿದವರು ಮತ್ತೊಂದು ಸಾರಿ ಕೂಡ ಅದೇ ರೀತಿ ಕೇಳಿ ಅವರನ್ನು ಸತಾಯಿಸದೆ ಇರುವುದಿಲ್ಲ. ಮದುವೆಮಾಡಿಕೊಂಡವರಿಗೆ ಸುಖ ದೊರಕಬಹುದು; ದುಃಖ ದೊರಕಬಹುದು. ಜೀವನ ನಾಕವಾಗಬಹುದು; ನರಕವಾಗಬಹುದು. ಪಾಶ್ಚಾತ್ಯ ದೇಶಗಳಲ್ಲಿ ಮದುವೆಯಿಂದಾಗುವ ಅನಾಹುತಗಳನ್ನೇ ಹೆಚ್ಚಾಗಿ ವಿವರಿಸುವುದರಿಂದ ಅಲ್ಲಿಯವರು ದಾಂಪತ್ಯದ ಸಂಕೋಲೆಗೆ ಹೆದರುತ್ತಾರೆ. ಮದುವೆ ಮುಹೂರ್ತ ಬಂದಾಗ ಚಿಮ್ಮಿಣಿಯೊಳಗಿಂದ ತಪ್ಪಿಸಿಕೊಂಡ ವರ ವೀರರನ್ನು ಅವರು ಹಾಸ್ಯವಿಲಾಸದಿಂದ ಹೊಗಳುತ್ತಾರೆ. "ಮದುವೆ ಎಂಬುದು ಒಂದು ಲಾಟರಿ; ವಿವಾಹ ವಿಚ್ಛೇದನವೇ ಅದರ ಅತ್ಯುತ್ತಮ ಬಹುಮಾನ" ಎಂದು ಅವರು ಸಾರುತ್ತಾರೆ. "ಒಲುಮೆಯ ಕುಲುಮೆಯೇ ಮದುವೆ," "ಪ್ರೀತಿಯ ಹುಚ್ಚು ಬಿಡಿಸುವುದಕ್ಕೆ ಮದುವೆಯೇ ಮದ್ದು," "ಮದಿರಾ, ಮಕರಧ್ವಜ, ಮುಂತಾದ ಮಕಾರಪದಗಳಂತೆ ಮದುವೆಯೂ ಕೂಡ ಹೊರನೋಟಕ್ಕೆ ಮಾತ್ರ ಚೆನ್ನ" ಎಂದು ಮುಂತಾಗಿ ಪಾಶ್ಚಾತ್ಯರು ಹೇಳುತ್ತಾರೆ. "ಬ್ರಹ್ಮಚಾರಿಯಾಗಿರುವಾಗಲೇ ಜೀವನದ ಷಡ್ರಸಗಳನ್ನೂ ಅನುಭವಿಸಬೇಕೇ ಹೊರತು ಮದುವೆ ಆಗುವತನಕ ಕಾಯ

ಬಾರದು" ಅಂತಾರೆ. "ಮದುವೆಗೆ ಮುಂಚಿನ ಚೆಲ್ಲಾಟವೇ ಸುಖ ; ಮದುವೆ ಆಯಿತೆಂದರೆ ಗೃಹಸ್ಥಾಶ್ರಮದ ಗ್ರಹಚಾರ ಇದ್ದೇ ಇದೆ" ಅಂತಾರೆ. ವಿಚಾರಪರರಾದ ಬರಹಗಾರರೂ ಕೂಡ ಮದುವೆ ಮಂಟಪದ ಮೇಲೆ ಮಣ್ಣೆರಚುತ್ತಾರೆ. ಲಗ್ನವಾದ ಕೂಡಲೇ ವರನಿಗೆ ಏಳು ವರ್ಷ ವಯಸ್ಸು ಹೆಚ್ಚುತ್ತದೆ ಎಂದು ಹೀಯಾಳಿಸಿದ ಮಹಾರಾಯ ಯಾರು ಅಂದರೆ, ಷೇಕ್ಸ್‌ಪಿಯರಿಗೆ ಮೋಸಮಾಡಿ ಅವನ ನಾಟಕಗಳನ್ನೆಲ್ಲ ತಾನೇ ಬರೆದ, ಬೇಕರ್ ಸಾಹೇಬರು! ವೆಬ್‌ಸ್ಟರ್ ಮಹಾಶಯ ಬರೆದಿರುವ ನಾಟಕವೊಂದರಲ್ಲಿ ಆರ್ಟನಿಸ್ ಎಂಬ ಪಾತ್ರದ ಬಾಯಿಂದ, "ಏನಯ್ಯಾ! ಮದುವೆಮಾಡಿಕೊಳ್ಳುತ್ತೀಯಾ? " ಎಂಬ ಪ್ರಶ್ನೆಗೆ, ಈ ರೀತಿ ಉತ್ತರ ಹೊರಡುತ್ತದೆ:

"ಕೇಳಿರಿ ಬೇರೆಲೋಕವುಂಟೆ
ನರಕವಲ್ಲದೆ ಮದುವೆಯಲ್ಲಿ ?"

ಮಹಿಳಾ ಚಳುವಳಿ ಮಾಡಿದ ಮೇಲಂತೂ ಮದುವೆ ಎಂದರೆ ತರುಣಿಯರಿಗೆ ಬೇಜಾರು ತರುಣರಿಗೆ ಬೆದರಿಕೆ !

ಆದರೆ, ಸನಾತನ ಧರ್ಮಾವಲಂಬಿಗಳಾದ ನಮ್ಮಲ್ಲಿ, ಅದರಲ್ಲೂ ನನ್ನ ಕಾಲದಲ್ಲಿ, ನನಗೆ ಮದುವೆ ಎಂದರೆ ಕೋಣೆ ಸೇರಿಗಿಳಿದ ಹಾಗೆ. ಹೊಸಲು ದಾಟುವಷ್ಟು ಸುಲಭ. ಬಿಸಿಲು ಕಾಯುವಷ್ಟು ಹಿತ. ಮದುವೆಯಾಗದೆ ಮೋಕ್ಷವಿಲ್ಲವೆಂದು ಮನುಧರ್ಮಶಾಸ್ತ್ರವೇ ಹೇಳಿಬಿಟ್ಟಿದೆ.

ಆದ್ದರಿಂದ ನನಗೆ ಆನಂದವಾದದ್ದರಲ್ಲಿ ಆಶ್ಚರ್ಯವೇನಿದೆ ?

ಶನಿವಾರ. ಕಾಲೇಜಿರಲಿಲ್ಲ. ಬೆಳಗ್ಗೆ ಎದ್ದು ಬಳೇಪೇಟೆಯಲ್ಲಿದ್ದ ನನ್ನ ತಂಗಿಭಾವನಮೈದುನನ ಮನೆಗೆ ಹೊರಟೆ. ಆತನ ಕೈಯಲ್ಲಿ ಮನೆಯಿಂದ ಕೊಂಚ ಹಣ ರವಾನಿಸಿದ್ದರು. ಹಿಂದಕ್ಕೆ ಬಂದಾಗ ಸೂರ್ಯ ನೆತ್ತಿಮೇಲಿದ್ದ. ವಿಶುವಿಗೆ ಪೂರಾರೇಗಿತ್ತು. ಅವನು ಮೇಜಿನ ಹತ್ತಿರ ಕುಳಿತು ಸರಸರನೆ ಕಾಗದ ತುಂಡುಗಳಲ್ಲಿ ಏನೇನೋ ಗೀಚಿ ಬಿಸಾಕುತ್ತಿದ್ದ. ನೋಡಿದರೆ ಪ್ರತಿಯೊಂದರಲ್ಲೂ ಅವನ ರುಜು. ತನ್ನ ಹೆಸರನ್ನು ಇಂಗ್ಲೀಷಿನಲ್ಲಿ ಬರೆದು ತಳಿರು ತೋರಣಗಳಿಂದ ಅಲಂಕರಿಸಿ ತನ್ನ ಜನ್ಮ ಸಾರ್ಥಕವಾಗುವಂತೆ ವಿಶು ರುಜು ಕಲಿಯುತ್ತಿದ್ದ. ಸಾಮಾನ್ಯವಾಗಿ ೧೬, ೧೭ ವಯಸ್ಸಿನಲ್ಲಿ ನಮ್ಮ ದೇಶದವರಿಗೆ ತಗಲುವ ರೋಗ ಇದು. ಸೊಟ್ಟಗೆ ನೆಟ್ಟಗೆ ಸಾಲಾಗಿ ಡೊಂಕಾಗಿ ಚುಕ್ಕಿಗಳನ್ನೂ ಗೆರೆಗಳನ್ನೂ ಜೋಡಿಸಿ ನಮ್ಮ ನಮ್ಮ ರುಜುಗಳನ್ನು ರೂಪುಗೊಳಿಸಲು ನಾವು ಮಾಡಿರುವ ಪ್ರಯತ್ನಗಳೆಷ್ಟು! ಹಾಳುಮಾಡಿರುವ ಹಾಳೆಗಳೆಷ್ಟು! ಚೆಲ್ಲಿರುವ ಶಾಯಿಯ ಕೊಡಗಳೆಷ್ಟು ! ಇತರರಿಗೆ ಅಚ್ಚರಿಯನ್ನುಂಟುಮಾಡಿ ಅವರು ಮೂಗಿನಮೇಲೆ ಬೆರಳಿಡುವಷ್ಟು ವಕ್ರವಾಗಿ ರುಜುಹಾಕಿದರೆ ನಮಗೊಂದು ಹೆಮ್ಮೆ! ಕಡೆಗೆ ಶ್ರೀನಿವಾಸ ತಾತಾಚಾರ್ ಎಂದು ರುಜು ಹಾಕಿದರೆ ಜಿಗೊಮಾರ್ ಅಂತ ಓದುತ್ತಾರೆ ಜನ! ಬಿಳಿಗಿರಿರಾಯರು ಎಂದು ರುಜುಹಾಕಿದರೆ ಕಲ್ಲಿದ್ದಲು ಅಂತ ಓದುತ್ತಾರೆ ಜನ! ಅಷ್ಟರಲ್ಲೇ ರುಜುದಾರನಿಗೆ ತೃಪ್ತಿ. ರುಜುವಿನಿಂದಲೇ ಮನುಷ್ಯನ ಗುಣಾವಗುಣಗಳನ್ನು ನಿರ್ಧರಿಸಬಹುದು. ಆತನ ವಿನಯ, ಸರಳತೆ, ಸರಪಳಿ ಪ್ರೇಮ, ಅಲಂಕಾರಾಭಿಲಾಷೆ, ಕೊಂಕುಬುದ್ಧಿ, ಚಕ್ರಯುಕ್ತಿ

ಎಲ್ಲವೂ ರುಜುವಿನಲ್ಲಿ ಅಡಗಿರುತ್ತದೆ. ಕಪ್ಪೆಗಳಂತೆ ಕುಪ್ಪಳಿಸುವ ಚಪಲವಿರುವವರು ತಮ್ಮ ರುಜುವಿನಲ್ಲೂ ಅಕ್ಷರಗಳನ್ನು ಎತ್ತಿ ಹಾಕಿ ಕುಣಿಸುತ್ತಾರೆ. ಕೆ. ವಿ. ರಾಮಯ್ಯ ಎಂಬ ರುಜುವಿನಲ್ಲಿ ಕೆಗೂ ವಿಗೂ ಸುತ್ತ ಒಂದು ಚಕ್ರವನ್ನೆಳೆದು ಅದರ ಬಲತುದಿಯಿಂದ ಕೆಳಭಾಗಕ್ಕೆ ಒಂದು ಗೆರೆಹಾಕಿ ಅದನ್ನೇ ಎಡಕ್ಕೆ ಡೊಂಕಿಸಿ ಬಲಕ್ಕೆ ಸಾಗಿಸಿ ರಾವಿನ ತುದಿತನಕ ತಳಮಳಿಸುತ್ತಾರೆ. ಯವಿನ ಯವತ್ತಂತೂ ಕಾಗದ ಕೆಳಮೂಲೆಯ ತುದಿತನಕ ತತ್ತರಿಸುತ್ತದೆ. ತನ್ನ ರುಜುವಿಗೆ ಇಂತಹ ರೂಪು ಅಂತ ನಿರ್ಧರಿಸಿದಮೇಲೂಕೂಡ ಸಮಯ ಸಿಕ್ಕಿದಾಗಲೆಲ್ಲ ಸದ್ಗೃಹಸ್ಥರು, ಕನ್ನಡಿ ಮುಂದೆ ಕೂತು ತಮ್ಮ ಮೂತಿಯನ್ನು ಮತ್ತೆ ಮತ್ತೆ ನೋಡಿ ಆನಂದಿಸುವ ಹಾಗೆ, ತಮ್ಮ ರುಜುವನ್ನು ಮತ್ತೆ ಮತ್ತೆ ನೋಡಿ ಆನಂದಿಸುವರು. ಕಾಗದಕಡ್ಡಿ ಸಿಗದಿದ್ದರೆ ಬರೀ ಬೆರಳಿಂದ ಗಾಳಿಯಲ್ಲೇ ಬರೆಯುತ್ತಾರೆ!

ನಾನು ಕೋಣೆಯೊಳಗೆ ನುಗ್ಗಿದ ಕೂಡಲೇ ವಿಶು ಎದ್ದು ಬಂದು ಅರಶಿನ ಹಚ್ಚಿದ ಕಾರ್ಡೊಂದನ್ನು ತಂದು ನನ್ನ ಮೂತಿಗೆ ತಿವಿದ. "ಓದೋ! ಓದೋ!" ಅಂತ ಅರಚಿದ. ಕಿವಿಯನ್ನು ಹಿಡಿದೆಳೆದು ಕಿರಿಚಿಸಿದ. ಸ್ನೇಹ ಅನ್ನುವುದು ಸ್ವರ್ಗದಲ್ಲೂ ಸಿಗುವುದಿಲ್ಲ ಅಂತ ತಿಳಿದವರು ಹೇಳುತ್ತಾರೆ. ನಿಜ. ದೇವರು ನಮಗೆ ನೆಂಟರನ್ನುಕೊಟ್ಟರೂ, ಇಷ್ಟರನ್ನು ಮಾತ್ರ ನಾವೇ ಆರಿಸಿಕೊಳ್ಳಬಹುದಲ್ಲಾ; ಅಷ್ಟಾದರೂ ನಮಗೆ ಸ್ವಾತಂತ್ರ್ಯ ಇದೆಯಲ್ಲಾ-ಅಂತಾರೆ, ನಿಜ. ಆದರೂ, ಕಿವಿಕಚ್ಚುವಷ್ಟು ಸ್ನೇಹವಿದ್ದರೆ ಆ ಸ್ವರ್ಗ ಬೇಡ ಅನ್ನಿಸುತ್ತದೆ. ಲೋ! ನೂರುದೂರ ಸ್ನೇಹಿತರಾಗಿದ್ದರೆ ಸಾಕು ಅಂತ ಎಷ್ಟು ಸಲ ಬೇಡಿಕೊಂಡರೂ ವಿಶು ಇದುವರೆಗೂ ಅದಕ್ಕೊಪ್ಪಿಲ್ಲ.

ಕಾರ್ಡಲ್ಲೇನಿತ್ತು ಅಂತ ನಾನು ಓದದೆ ಹೇಳಬಲ್ಲೆ. ನನ್ನ ಮದುವೆ ನಿಶ್ಚಯವಾಗಿದೆ; ಜೂನ್ ೩ನೇ ತಾ|| ನ ಶುಭಲಗ್ನದಲ್ಲಿ.

ಅಷ್ಟರೊಳಗೆ ಹಾಳು ಹರಿರಾಯ ಕೋಣೆಯೊಳಕ್ಕೆ ತಲೆ ಇಟ್ಟ. "ಲೋ! ಹೋಗೋಣ" ಅಂದ, ವಿಶು. ನನಗೆ ಗೊತ್ತು 'ನಾನೇ ಪಶು', 'ಹೋಗುವುದು ಹೋಟಲಿಗೆ' ಅಂತ. ಹರಿರಾಯನೋ ಬಕಾಸುರನ ಅಪರಾವತಾರ. ನೋಡಿದರೆ ಸಾಕ್ಷಾತ್ ಬಕಸನ್ಯಾಸಿ. ಮತ್ತೊಬ್ಬನ ಕಾಸು ಅಂದರೆ ಅವನ ಗಂಟಲಿನ ಆಳ ಬಿಲ್ಲು ತೀರಿಸಿದವನೇ ಬಲ್ಲ! ಊರಲ್ಲಿರುವ ಆನಂದಭವನಗಳನ್ನೆಲ್ಲ, ಪ್ರೊಪ್ರೈಟರು ಸಹಿತ, ತಿಂದು, "ತಕೊಂಡು ಬಾರೋ ಇನ್ನೊಂದಿಷ್ಟು!" ಅಂತ ಕೂಗೋ ಛಾತಿ, ಅವನದು. ಸಂಜೆ ೫ ಗಂಟೆಗೆ ನನಗೆ ವಪನ ಅಂತ ಅವರಿಬ್ಬರೂ ತೀರ್ಮಾನಿಸಿದರು. ರಂಗಣ್ಣನವರ ಸೋದರಳಿಯ ಸಂಜೆ ಬಂದು ನನ್ನ ಅಳತೆ ತೆಗಿಯುತ್ತಾರೆ ಅಂತ ಗೊತ್ತಿದ್ದ ನನಗೆ ಇದರಿಂದ ಕೊಂಚ ಕಳವಳವಾಯಿತು. "ನೀನು ತಿನ್ನದೆ ಇದ್ದರೆ ಬೇಡ. ನಿನ್ನ ಹೊಟ್ಟೆ ಸುತ್ತಳತೆ ಇದ್ದ ಹಾಗೆಯೇ ಇರಲಿ....ನಮಗೇನು ಬಂದಿದೆಯೋ, ಪ್ರಾರಬ್ಧವೇ?" ಎಂದು ಅವರು ಅಟಾಟೋಪ ಮಾಡಿದರು. ೫ ಗಂಟೆಗೆ

ಸಿದ್ಧ, ಹರಿರಾಯ ಬಾಗಿಲಲ್ಲಿ. ಸರಿ. ಎಳೆದುಕೊಂಡು ಹೋದರು. ಮಾಡಿದರು. "ಬದುಕಿದೆಯಾ ಬಡಜೀವಿ" ಅಂತ ಕೋಣೆಗೆ ಬಂದು ನೆಲದಮೇಲೆ ಬಿದ್ದುಕೊಂಡೆ. ವಿಶು ಊರಿಗೆ ಹೊರಡುತ್ತಿದ್ದ. ಬೇಸಿಗೆ ರಜಕ್ಕಾಗಿ ಕಾಲೇಜು ಬಾಗಿಲನ್ನ ಆದಿನವೇ ಹಾಕಿಬಿಟ್ಟಿದ್ದರು. ಆದರೂ ಅಳತೆಗಾಗಿ ನಾನು ಉಳಿಯಬೇಕಾಗಿತ್ತು. "ಲೋ ! ವಿಶೂ ! ನೀನೂ ಬರಬೇಕು" ಅಂದೆ. "ಧಡಿಯಾ ! ನಾನಿಲ್ಲದೆ ನೀನು ಆ ಹುಡುಗಿ ಕೈಯನ್ನ ಹಿಡಿದರೆ ನೋಡು !" ಎಂದು ಗದರಿಸುತ್ತಾ ನನ್ನ ಬೆನ್ನಮೇಲೆ ಒಂದು ಬಿಟ್ಟ. "ತಂಟೆಗಿಂಟೆ ಮಾಡಿದರೆ, ನಿನ್ನ ಕಿವೀನ ಹೀಗೆಹಿಡಿದು ಹೀಗೆ ಹಿಂಡುತ್ತೀನೆ, ಹುಷಾರ್" ಅಂತ ಪ್ರತ್ಯಕ್ಷ ಪ್ರಮಾಣವಾಗಿ ಎಳೆದ. ಅಂತೂ, ಹೊರಟೆ.

ನಾನು ಆ ಸೋದರಳಿಯನಿಗಾಗಿ ಕಾದೆ. ರಂಗಣ್ಣನವರು ಕಳುಹಿಸಿದ್ದ ಕಾಗದವನ್ನು ಮತ್ತೊಮ್ಮೆ ಓದಿದೆ. ನಶ್ಯದ ಬಣ್ಣ, ಉಲ್ಲನ್ ಬಟ್ಟೆ, ಪರಶುರಾಂ ಅಂಗಡಿ, ಸೋದರಳಿಯ, ಭಾನುವಾರ, ಅಂತ ಬರೆದಿತ್ತು. ಅಂದರೆ, ಅವರು ಬರುವುದು ಮರುದಿನ ಅಂತ ನನಗೆ ಆಗ ತೋರಿಬಂತು. ಎದ್ದು ಬಾಗಿಲು ಹಾಕಿಕೊಂಡು ಲಾಲ್‌ಬಾಗ್ ಕಡೆ ನಡೆದೆ. ಮನಸ್ಸಿನಲ್ಲಿ ಏನೇನೋ ಯೋಚನೆ—ಮದುವೆ ಮೆರವಣಿಗೆ, ಮಾವನ ಮನೆ, ಮಕ್ಕಳ ಆಸ್ಪತ್ರೆ ಎಂದು ವೇಗವಾಗಿ ಓಡಿತು ನನ್ನ ಮಿದುಳು. ಲಾಲ್‌ಬಾಗ್‌ನಲ್ಲಿ ಒಂದು ಕಲ್ಲು ಬೆಂಚಿನಲ್ಲಿ ಕೂತ ತಕ್ಷಣವೇ ಈ ಯೋಚನೆಗಳೆಲ್ಲವೂ ಥಟಕ್ಕನೆ ನಿಂತುವು. ಏಕೆಂದರೆ, ಎದುರು ಬೆಂಚಿನಲ್ಲಿ ಒಂದು ಹುಡುಗಿ ತಾಯಿ ತಂಗಿ ಸಹಿತವಾಗಿ ಕೂತಿತ್ತು.

---

ಬೆಂಗಳೂರಿನ ನೌಕರರನೇಕರು ವರ್ಗ ಮಾಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರಂತೆ.

—ಏಕೆ ಸುಂಕದಕಟ್ಟೆ ಕೆಲಸಗಳಿಗೆ ವರ್ಗ ಕೇಳುತ್ತಿದ್ದಾರೆಯೋ ?

* * * *

ಭಾರತೀಯರು ವಿಮಾನ ಧಾಳಿಗೆ ಹೆದರುವುದಿಲ್ಲ ಎಂದು ಮುಖಂಡರೊಬ್ಬರ ಹೇಳಿಕೆ.

—ಅಲ್ಲವೇ. ವಿಮಾ ಧಾಳಿಗೇ ಹೆದರದ ನಾವು ವಿಮಾನ ಧಾಳಿಗೆ ಹೆದರುತ್ತೀವೆ ?

* * * *

ಬೆಂಗಳೂರಿನಲ್ಲಿ ಬೆಲ್ಲದ ಅಭಾವದಿಂದ ಸಂಕ್ರಾಂತಿಗೆ ಎಳ್ಳು ಬೆಲ್ಲಕ್ಕೆ ಬದಲು ಹಬ್ಬಕ್ಕೆ ಎಳ್ಳು ನೀರು ಬಿಟ್ಟರೆಂಬುದು ಶುದ್ಧ ಸುಳ್ಳು.

* * * *

ಬಳೇಪೇಟೆ ಚೌಕವನ್ನು ದಾಟುತ್ತಿದ್ದಾಗ ನನಗೆ ಈ ಪದ್ಯದ ಯೋಚನೆ ಮೂಡಿತು ಎಂದು ನವಕವಿಯ ಆತ್ಮ ಹೇಳಿಕೆ.

—ಚೌಕದ ಅಪಘಾತಗಳ ಜತೆಗೆ ಇದೊಂದು ಇನ್ನುಮೇಲೆ.

# ಬೆಣ್ಣೆ-ರೇಷನಿಂಗ್

ಬೆಳಿಗ್ಗೆ ಶಾರದಮ್ಮನ ಮನೆಗೆ ಹೋಗುವಾಗ ಬಲು ಖುಷಿ ನನಗೆ. ಏಕೆಂದರೆ ಹಿಂದಿನ ದಿನವೇ ಮಂಡ್ಯದ ಅಂಗಡಿಯಿಂದ ಅವರ ಮನೆಗೆ ಒಂದು ವೀಸೆ ಬೆಣ್ಣೆ ಬರುವಂತೆ ಏರ್ಪಾಡು ಮಾಡಿದ್ದೆ. ಶಾರದೆಗೂ ಆಕೆಯ ಮಗಳಿಗೂ ಬೆಣ್ಣೆ, ಮಂಡ್ಯದ ಬೆಣ್ಣೆ ಎಂದರೆ ಬಾಯಿಲ್ಲಾ ನೀರಾಗುತ್ತಿತ್ತು. ಅಂದಮೇಲೆ ನಾನು ಬೆಳಿಗ್ಗೆ ಹೋದರೆ ರವೆ ಇಡಲಿ ಖಂಡಿತ. ಬೆಣ್ಣೆ ಕಳುಹಿಸಿದವನೆಂದು ನನ್ನಮೇಲೆ ತುಂಬಾ ವಿಶ್ವಾಸವಿದ್ದೇ ಇರುತ್ತದೆ. ತುಂಬಾ ಉಪಚಾರ ಮಾಡಿಯೇ ಮಾಡುತ್ತಾರೆ, ಎಂದುಕೊಂಡು ಶಾರದಮ್ಮನ ಮನೆಗೆ ಸಂತೋಷದಿಂದ ಹೊರಟೆ.

ಶಾರದಮ್ಮ, ನಮ್ಮ ಸೋದರಸೊಸೆ.

ನಾನು ಹೋಗುವವೇಳೆಗೆ ಬೆಳಿಗ್ಗೆ ಎಂಟು ಗಂಟೆಯಾಗಿತ್ತು. ನಾನೆಣಿಸಿದಂತೆ ರವೆ ಇಡಲಿ ತಯಾರಾಗಿತ್ತು. ತಾಯಿ ಮಕ್ಕಳಿಬ್ಬರೂ ನಾಲ್ಕು ನಾಲ್ಕು ಇಡಲಿ ಹೆರಳೇಕಾಯಿನಷ್ಟು ಬೆಣ್ಣೆ ಬಿಡಿ ಎಲೆಯ ಮೇಲೆ ಇಟ್ಟುಕೊಂಡು ತಿನ್ನುವುದಕ್ಕೆ ಸಿದ್ಧರಾಗಿದ್ದರು. ನಮ್ಮ ಸೋದರಮಾವನು ಬೆಳಿಗ್ಗೆ ಆರು ಗಂಟೆಗೆ ತನ್ನ ಕೆಲಸಕ್ಕಾಗಿ ರೈಲ್ವೆ ಸ್ಟೇಷನ್ನಿಗ ಹೊರಟುಹೋಗಿದ್ದನು. ನಮ್ಮೂರು ರೈಲುಗಳೆಲ್ಲಾ ದ್ವಾದಶಿ ರೈಲುಗಳು. ಬೆಳಗಾಗುವುದಕ್ಕೆ ಮುಂಚೆಯೇ ಆಚಾರಕ್ಕೆ ಶುರುಮಾಡುತ್ತವೆ. ಆ ಕಾರಣ ರೈಲ್ವೆ ನೌಕರನಾದ ಸೋದರಮಾವನು ಕಾಗೆ ಕರ್ರೆನ್ನುವುದಕ್ಕೆ ಮುಂಚೆಯೇ ಗುಡ್ಸೆಡ್ ಬಾಗಿಲು ತೆಗೆಯುತ್ತಿದ್ದನು. ಹೀಗಾಗಿ ನಾನು ಹೋಗುವ ಹೊತ್ತಿಗೆ ಶಾರದೆ ಅವಳ ಮಗಳು ಇಬ್ಬರೇ ಇದ್ದರು.

"ಬಾ ಸಾಂಬೂ ಒಳಗೆ ಬಾ. ಇದು ನೋಡು ಯಾರೋ ಪುಣ್ಯಾತ್ಮರು ಮಂಡ್ಯದಿಂದ ಬೆಣ್ಣೆ ಕಳುಹಿಸಿದ್ದಾರೆ. ಇಡಲಿ ಮಾಡಿದ್ದೇನೆ. ನೀನೂ ತಿನ್ನುವಂತೆ ಬಾ. ಬೆಣ್ಣೆ ಜತೆಗೆ ಈ ಇಡಲಿ ಸಿಕ್ಕರೆ ಸ್ವರಾಜ್ಯ ಸಿಕ್ಕಂತೆಯೇ, ಬಾ" ಎಂದು ಶಾರದೆ.

"ಯಾರು ಕಳುಹಿಸಿರಬಹುದು ಮಂಡ್ಯದಿಂದ, ಶ್ಯಾನುಭೋಗ ಭೀಮಯ್ಯನವರೇ, ಇಲ್ಲವೇ, ಕಡೂರು ಸುಬ್ಬಮ್ಮನವರು ಈಗ ಮಂಡ್ಯದಲ್ಲಿದ್ದಾರೆ. ಅವರು ಕಳುಹಿಸಿರಬಹುದೇ ಅಥವಾ ಪಾತು ಗಂಡ ಈಗ ಮಂಡ್ಯದಲ್ಲಿ ಮೇಷ್ಟರಾಗಿದ್ದಾನೆ, ಪಾತು ಏನಾದರೂ ಕಳಿಸಿದ್ದಾಳೆಯೇ" ಎಂದು ಶಾರದೆ ಮಗಳು.

"ಯಾರೂ ಅಲ್ಲ, ನಾನೇ ಕಳಿಸಿದವನು" ಎಂದು ವಿನಯದಿಂದ ಸ್ವಲ್ಪ ತಲೆಬಾಗಿಸಿ ನಾನು ಹೇಳಿದ. ಹಾಗನ್ನುವಾಗಲೇ ಇವರಿಬ್ಬರೂ ಕೃತಜ್ಞತೆಯನ್ನು ಯಾವ ರೀತಿ ತೋರಿಸುತ್ತಾರೊ ಎಂದು ಯೋಚನೆಪಡುತ್ತಲೇ ಹೇಳಿದೆ. "ಥೀ ಥೀ, ನಿನಗಾದರೂ ಆ ಬುದ್ಧಿ ಯಾಕೆ ಬರಬಾರದು ನಮ್ಮ ಯೋಚನೆ ಅಷ್ಟರವುಟ್ಟಿಗೆ ನೀನು ಮಾಡಿದ್ದಿಂದು, ಬೆಣ್ಣೆ ಹೊತ್ತಿಗೆ ಕಣ್ಣುಬಿಟ್ಟುಕೊಂಡು ಬರುತ್ತೀಯೆ ಹೊರತು, ಅದನ್ನು ನಮಗೆ ಕಳುಹಿಸುವ ಯೋಚನೆ ಏಕೆ ಮಾಡುತ್ತೀಯೆ?" ಎಂದು ನಮ್ಮ ಸೋದರಸೊಸೆ.

"ಇಷ್ಟಕ್ಕೂ ನೀನೆಲ್ಲಿ ಮಂಡ್ಯಕ್ಕೆ ಹೋಗಿದ್ದೆ. ಇದೇ ಊರಿನಲ್ಲೇ ಕಂಬ ಬಡೆದ

ಹಾಗೆ ನಿಂತುಕೊಂಡಿದ್ದೀ, ಇಷ್ಟಕ್ಕೂ ನಿನಗೆಲ್ಲಿ ಹಣ ಸಿಕ್ಕಿತು" ಎಂದು ಶಾರದೆ ಮಗಳು.

ನನಗೆ ದಿಟವಾಗಿಯೂ ದುಃಖವಾಯಿತು. ದುಃಖದಲ್ಲಿನ ಖಕ್ಕೆ ಕವತ್ತು ಕೊಡುವಂತಾಯಿತು. ಏನು ಮಾಡುವುದು? ಇರಲಿ ಎಂದು ನಮ್ಮ ಸೋದರ ಸೊಸೆಗೆ ಒಂದು ಉಪಾಯ ಹೇಳಿದೆ.

"ನೋಡು ಶಾರದೆ. ಈಗೊಂದು ಕೆಲಸ ಮಾಡು, ಮೂರು ಜನಕ್ಕೂ ಮೂರು ಕಾಗದ ಬರಿ. ಅವರು ಕಳುಹಿಸಿದ ಬೆಣ್ಣೆ ಬಂದು ತಲುಪಿತೆಂದೂ ಅದಕ್ಕಾಗಿ ನೀವುಗಳು ಕೃತಜ್ಞರೆಂದೂ, ಇಲ್ಲಿ ಎಲ್ಲರೂ ಸೌಖ್ಯವೆಂದೂ, ಅಲ್ಲಿ ಎಲ್ಲರೂ ಅಂತೆಯೇ ಎಂದೂ ಕಾಗದ ಬರಿ. ಕಳುಹಿಸಿದವರಾದರೆ ಹು ಎನ್ನುತ್ತಾರೆ, ಇಲ್ಲವಾದರೆ ಸುಮ್ಮನಿರುತ್ತಾರೆ. ಆಗ ತಿಳಿಯುತ್ತೆ ಯಾರು ಕಳುಹಿಸಿದರು, ಯಾರು ಇಲ್ಲ ಎಂದು."

ಶಾರದೆಯು ಆಗಬಹುದು ಎಂದು.

ಆದರೆ ಕೂಡಲೆ ಶಾರದೆಯ ಮಗಳು ಒಂದು ಕೊಕ್ಕೆ ಇಟ್ಟಳು. "ಮೂವರಲ್ಲಿ ಯಾರೋ ಒಬ್ಬರು ಕಳುಹಿಸಿರಬೇಕು. ನಾವು ಹಾಗೆ ಕಾಗದ ಬರೆದರೆ ಇನ್ನಿಬ್ಬರಿಗೆ ಮನಸ್ಸು ನೋಯಿಸಿದಂತಾಗುವುದಿಲ್ಲವೇ" ಎಂದು.

ಆದರೆ ನಾವಿಬ್ಬರೂ ಅವಳ ಮಾತಿಗೆ ಬೆಲೆ ಕೊಡಲಿಲ್ಲ. ಬೆಲೆ ಕೊಡುವುದು ಹಾಗಿರಲಿ, ಪೂರ್ತಿ ಮಾತನಾಡಲೂ ಬಿಡಲಿಲ್ಲ. ಅಷ್ಟಷ್ಟಕ್ಕೆ ನಿಲ್ಲಿಸಿ ಕಾಗದ ಬರೆಯಲು ಉಪಕ್ರಮಿಸಿದೆವು.

ಗಂಟಲತುಂಬ ಇಡಲಿ ತುಂಬಿಕೊಂಡು ಅವನ್ನು ಬೆಣ್ಣೆಯಿಂದ ಕೆಳಕ್ಕೆ ಇಳಿಸಿದ ನನಗೆ ಕಾಗದ ಬರೆಯಲು, ಬರೆಸಲು ಸ್ವಲ್ಪ ಕಷ್ಟವೇ ಆಯಿತು. ಶಾರದೆ ಹೇಳಿ ಬರೆಯಿಸಿದಳು. ನಾನು ಬರೆದೆ. ಪ್ರೀತಿಪಾತ್ರರಾದ ಇಂತಿಂಥವರಿಗೆ ನೀವು ವಿಶ್ವಾಸಪೂರ್ವಕವಾಗಿ ಕಳುಹಿಸಿದ ಬೆಣ್ಣೆ ಬಂದು ತಲುಪಿತು. ಇಲ್ಲಿ ಎಲ್ಲರೂ ಕ್ಷೇಮ. ನೀವುಗಳೆಲ್ಲರೂ ಸೌಖ್ಯವಾಗಿದ್ದೀರೆಂದು ನಂಬುತ್ತೇನೆ. ಬೆಣ್ಣೆ ಬಹಳ ರುಚಿಯಾಗಿತ್ತು. ಹಸುವಿನ ಬೆಣ್ಣೆಯೇ ಆಗಿದ್ದಿರಬೇಕು. ಇಲ್ಲದಿದ್ದರೆ ಅಷ್ಟು ರುಚಿಯಾಗಿರುತ್ತಿರಲಿಲ್ಲ. ಇತ್ಯಾದಿ, ಇತ್ಯಾದಿ, ನಿಮ್ಮ ಶಾರದೆ. ಶಾರದೆಯೂ ತನ್ನ ರುಜುವನ್ನು ಹಾಕಿದಳು. ಕಾಗದಗಳೂ ಅಂಚೆಕಂಬದೊಳಕ್ಕೆ ನನ್ನಿಂದಲೇ ಹಾಕಲ್ಪಟ್ಟಿತು.

ನಾಲ್ಕಾರು ದಿವಸಗಳಾದ ಮೇಲೆ ತಿರುಗಿ ಶಾರದೆ ಮನೆಗೆ ಹೋದೆ. ಆ ವೇಳೆಗೆ ಜವಾಬುಗಳು ಬಂದಿದೆಯೆಂದುಕೊಂಡು ಹೋದೆ. ಜವಾಬುಗಳೂ ಬಂದಿತ್ತು.

ಶ್ಯಾನುಭೋಗ ಭೀಮಯ್ಯನವರ ಕುಟುಂಬವು ನಮ್ಮ ಕಾಗದವು ಬಂದಿತೆಂದೂ, ಆದರೆ ಅವರು ಬೆಣ್ಣೆಯನ್ನು ಕಳಿಸಬೇಕೆಂದು ಯೋಚನೆಮಾಡುತ್ತಿದ್ದರೆಂದೂ, ಒಳ್ಳೆ ಬೆಣ್ಣೆಯು ಸಿಕ್ಕದಿದ್ದುದರಿಂದ ಕಳುಹಿಸಲಿಲ್ಲವೆಂದೂ, ಕಾಗದ ಬರೆದಿದ್ದರು. ಶ್ಯಾನುಭೋಗ ಭೀಮಯ್ಯನವರ ಕುಟುಂಬ, ಶಾರದಮ್ಮನ ಅತ್ತೆ ತಂಗಿ.

ಕಡೂರು ಸುಬ್ಬಮ್ಮನವರು ನಮ್ಮ ಕಾಗದವು ತಲುಪಿತೆಂದೂ, ನಾವುಗಳೆಲ್ಲರೂ ಕ್ಷೇಮವಾಗಿರುವುದಕ್ಕೆ ಸಂತೋಷಪಡುವ

ರೆಂದೂ, ಅವರ ಮನೆಯ ಹಸುವು ಇನ್ನೂ ಕರು ಹಾಕಿಲ್ಲವಾದ ಕಾರಣ ಹಾಲೇ ಕೊಡುತ್ತಿಲ್ಲವೆಂದೂ, ಆ ಕಾರಣ ಬೆಣ್ಣೆಗೆ ಅವಕಾಶವಾಗಲಿಲ್ಲವೆಂದೂ, ಈಗ ಅದು ಕರು ಹಾಕುವ ದಿನವೆಂದೂ, ಇಷ್ಟರಲ್ಲೇ ಬೆಣ್ಣೆಯನ್ನು ಕಳುಹಿಸಬೇಕೆಂದಿರುವ ರೆಂದೂ, ಮಂಡ್ಯದ ಹುಲ್ಲು ತಿಂದ ಮಂಡ್ಯದ ಹಸುಗಳ ಬೆಣ್ಣೆಯು ಬೆಣ್ಣೆಮುಚ್ಚೋರೆಯಂತೆ ರುಚಿಕರವೆಂದೂ ಬರೆದಿದ್ದರು. ಕಡೂರು ಸುಬ್ಬಮ್ಮನವರು ಶಾರದೆಯ ಜ್ಞಾತಿಗಳ ಕುಟುಂಬ.

ಪಾತು ಗಂಡನಿಂದ ನಿರುತ್ತರ.

"ನನಗೆ ಗೊತ್ತು ಪಾತು ಗಂಡನೇ ಕಳಿಸಿರಬೇಕು. ಅದಕ್ಕೇ ಅವನು ಬರೆಯಲಿಲ್ಲ. ಪಾತುಗೆ ನಮ್ಮ ಹುಡುಗಿಯನ್ನು ಕಂಡರೆ ಬಹಳ ಪ್ರೇಮ. ಪಾತು ಹೇಳಿದ ಹಾಗೆ ಕೇಳುತ್ತಾನೆ ಅವಳ ಗಂಡ. ಮುತ್ತಿನ ಮಣಿಯಂತಹ ಹುಡುಗ, ಮೇಷ್ಟರಾದ ರೂ ನೂರೇ ಬಹಳ ಬುದ್ಧಿವಂತ. ಅಣಿಯಾಗಿ ಪಾತು ಹೇಳಿದಂತೆ ದಿವ್ಯನಾಗಿ ಸಂಸಾರ ಮಾಡುತ್ತಾನೆ" ಎಂದು ಶಾರದೆ ಪಾತು ಗಂಡನನ್ನು ಹೊಗಳಲು ಆರಂಭಿಸಿದಳು.

"ಪಾತು ಗಂಡ ಪಾಠ ಹೇಳಿಕೊಟ್ಟರೆ ಹುಡುಗರೆಲ್ಲರೂ ಬಾಯಿಬಾಯಿ ಬಿಡುತ್ತಾರಂತೆ. ಬೆಣ್ಣೇಲಿ ಕೂದಲು ತೆಗೆದಹಾಗೆ ಮಾತನಾಡುತ್ತಾನಂತೆ" ಎಂದು ಶಾರದೆ ಮಗಳು.

ನನಗೇಕೋ ರೇಗಿಹೋಯಿತು. "ಹೌದು ಹುಡುಗರು ಬಾಯಿಬಾಯಿ ಬಿಡಲೇಬೇಕು ಆಕಳಿಸುವಾಗ. ಬೆಣ್ಣೇಲಿ ಕೂದಲು ತೆಗೆದ ಹಾಗೆ ಮಾತನಾಡಬೇಕಾದರೆ, ಅವನೇ ಕೂದಲನ್ನು ಹಾಕಿದ್ದಿರಬೇಕು. ಕಳಿಂಗ ಅವನು, ಹೆಂಡತಿಗೆ ಲಾಟರಿ ಟಿಕೆಟ್ಟು ಮಾರಿ ದುಡ್ಡು ಹೊಡೆದುಕೊಂಡುಹೋಗಿ ಇಸ್ಪೀಟು ಆಡುತ್ತಾನೆ. ಅವನು ಬೆಣ್ಣೆ ದಿಟವಾಗಲೂ ಕಳುಹಿಸುತ್ತಾನೆಯೇ. ಇಷ್ಟೂ ಅಲ್ಲದೆ ಈಗ ಅವನು ಮಂಡ್ಯದಲ್ಲಿ ಇಲ್ಲ. ಒಂದು ತಿಂಗಳು ರಜಾ ತೆಗೆದುಕೊಂಡು ಹೆಂಡತಿ ಬಾಣಂತನಕ್ಕೆ ಅಂತ ಅರಕಲಗೂಡಿಗೆ ಹೋದರೆ ಅವಳ ಹಿಂದೆ ಇವನೂ ಹೋಗಿದ್ದಾನೆ. ಇನ್ನೂ ಒಂದು ಸಲ ಹೇಳುತ್ತೇನೆ. ನಾನೇ ಕಳಿಸಿದ್ದು ಬೆಣ್ಣೆಯನ್ನ. ನನ್ನ ಸ್ನೇಹಿತ ಒಬ್ಬ ಬೆಣ್ಣೆ ಅಂಗಡಿ ಇಟ್ಟಿದ್ದಾನೆ ಮಂಡ್ಯದಲ್ಲಿ. ಅವನಿಗೆ ಕಾಗದ ಬರೆದಿದ್ದೆ ನಿಮಗೆ ಕಳುಹಿಸುವಂತೆ" ಎಂದೆ.

ಅಲ್ಲಿಗೂ ಇವರಿಬ್ಬರೂ ನಂಬಲೇ ಇಲ್ಲ.

ಇದಾದ ನಾಲ್ಕೈದು ದಿನಗಳು ಅವರ ಮನೆಗೆ ಹೋಗಲೇ ಇಲ್ಲ. ಏನೇನೋ ಕೆಲಸ. ಇನ್ನೊಂದು ಸಾರಿ ಹೋಗುವ ಹೊತ್ತಿಗೆ ಪಾತು ಗಂಡನು ಬರೆದ ಕಾಗದ ಅರಕಲಗೂಡಿನಿಂದ ಬಂದಿತ್ತು. ಪಾತು ಹೇಳಿ ಬರೆಸಿದ್ದು ಎಂದು ಗೊತ್ತಾಯಿತು. ಅದರಲ್ಲಿ ನಮಗೆ ಬೆಣ್ಣೆಯು ರುಚಿಯಾಗಿ ತ್ತೆಂದುದನ್ನು ಕೇಳಿ ಅವರಿಗೆ ಸಂತೋಷವಾಯಿತೆಂದೂ, ಅವರೂ ಮಂಡ್ಯದಿಂದಲೇ ಬಾಣಂತನಕ್ಕೆ ಬೆಣ್ಣೆ ತರಿಸಿಕೊಳ್ಳುವರೆಂದೂ, ಇನ್ನೂ ಏನೇನೋ ಬರೆದಿದ್ದರು. ತಾವು ಕಳುಹಿಸಲಿಲ್ಲ ಎಂಬ ಮಾತೇ ಇಲ್ಲ. ಶಾರದೆ ಮಗಳು ಶುರು "ನಾನು ಹೇಳಲಿಲ್ಲವೇ ಪಾತು ಗಂಡ ಬಹಳ ಒಳ್ಳೆಯವ" ಎಂದು.

ಆವೇಳೆಗೆ ಮಂಡ್ಯದ ಅಂಗಡಿಯವನಿಂದ ನನಗೆ ಬೆಣ್ಣೆಯ ಲೆಖ್ಖವು ಬಂದಿತ್ತು. ಹತ್ತೂ ಚಿಲ್ಲರೆ ರೂಪಾಯಿಯೆಂದು ನಮೂದಿಸಿತ್ತು. ಆದಷ್ಟು ಬೇಗ ಹಣ ಕಳುಹಿಸಬೇಕೆಂದು ವಿನಂತಿಯಾಗಿತ್ತು. ಈ ಬಿಲ್ಲನ್ನು ನಾನು ಪಾತು ಗಂಡನಿಗೆ ಕಳುಹಿಸಿದೆ. ನನ್ನ ವಿಳಾಸವು ತಪ್ಪಾಗಿ ಬರೆಯಲ್ಪಟ್ಟಿತೆಂದೂ ಅವನ ಹೆಂಡತಿ ಶಾರದೆಗೆ ಬರೆದ ಕಾಗದದಿಂದ ಈ ಲೆಖ್ಖದ ಪಟ್ಟಿಯು ಅವನಿಗೆ ಹೋಗಬೇಕಾದ್ದೆಂದು ನನಗೆ ತಿಳಿಯಿತೆಂದೂ ಒಂದು ಕಾಗದವನ್ನು ಬರೆದು ಕಳುಹಿಸಿದೆ.

ಇದು ಏನಯ್ಯಾ ಇದೆಲ್ಲಾ ಏಕೆ ಬರೆದೆ ಎಂದು ನೀವು ಕೇಳಬಹುದು. ಅದನ್ನೇ ಹೇಳುವುದಕ್ಕೆ ಹೊರಟಿದ್ದೆ. ಈ ಘಟನೆಯು ಆದವಾರ ಕಡೂರು ಸುಬ್ಬಮ್ಮನವರಿಂದ ಒಂದು ವೀಸೆ ಬೆಣ್ಣೆ, ಶ್ಯಾನುಭೋಗ ಭೀಮಯ್ಯನವರ ಕುಟುಂಬದಿಂದ ಇನ್ನೊಂದು ವೀಸೆ ಬೆಣ್ಣೆ ಶಾರದಮ್ಮನ ಮನೆಗೆ ನಿರಾಯಾಸವಾಗಿ ಬಂದಿತು.

ಈಗ ಎಲ್ಲಿಲೂ ರೇಷನಿಂಗ್ ಎಂಬ ಗಲಾಟೆ. ಹಗಲಾದರೆ ರಾತ್ರಿ ಊಟಕ್ಕೆ ಕಷ್ಟ. ಅಹನ್ಯಹನಿ ಕಾಲಕ್ಷೇಪ. ಎಲ್ಲರಿಗೂ ಹಳ್ಳಿಯ ಕಡೆಯ ಸಂಬಂಧೀಕರು ಇದ್ದೇ ಇರುತ್ತಾರೆ. ನಾಲ್ಕು ಜನರ ಹೆಸರು ಜ್ಞಾಪಿಸಿಕೊಂಡು ನಾಲ್ಕು ಕಾಗದ ಬರೆದರೆ ನಾಲ್ಕು ಊಟ ಕಳೆಯಬಹುದು. ಮಿಕ್ಕಿದ್ದು ಹೇಳಬೇಕೆ ?

ಏನನ್ನುತ್ತೀರಿ !

●

"ಕ್ಷಮಾಪಣೆ ಬೇಕಾದ ಸುದ್ದಿಗಳು"—

ದಿನಸಿ ಅಂಗಡಿಯ ಹತ್ತಿರ ಗಲಭೆಯಾದಾಗ ಪೋಲೀಸಿನವರು ಲಾಠಿ ಚಾರ್ಜು ಮಾಡಿದರು.

—ಕ್ಷಮಾಪಣೆಯು ಬೇಕೆ ?

* * * *

ಪಕ್ಕಪಕ್ಕದ ಶಿರೋನಾಮುಗಳು—

ಆಹಾರ ಪದಾರ್ಥಗಳ ಸಮಸ್ಯೆ.
ಪುರಂಧರ ದಾಸರ ಆರಾಧನೆ.

* * * *

ಸಹ ಪತ್ರಿಕೆಯ ಸುದ್ದಿ—

ಎಲ್ ಅಲಾಮಿನ್ನಲ್ಲಿ ಮೃತರಾದ ಇಬ್ಬರು ಯೋಧರು.
ಅವರ ಸಾಹಸಕ್ಕಾಗಿ ವಿಕ್ಟೋರಿಯಾ ಕ್ರಾಸ್ ಗೌರವ.

* * * *

ಪುಸ್ತಕ ವ್ಯಾಪಾರಿಯ ಜಾಹೀರಾತು—

"ಕಾಳರಾತ್ರಿ" – ಈಗಲೇ ಹೊರಬಿದ್ದುದು.

—ಕೃಷ್ಣಪಕ್ಷವಲ್ಲವೇ ?

# ಮಣ್ಯಂ ಕಂಪನಿಯವರ ತಯಾರಿಕೆಗಳು




ಮಣ್ಯಂ ಕಂಪನಿಯವರ ಸ್ನೋ, ಹೇರ್ ಆಯಿಲ್ ಮತ್ತು ಸೋಪ್ ಕರ್ನಾಟಕದಲ್ಲೆಲ್ಲ ಪ್ರಸಿದ್ಧಿ ಪಡೆದಿವೆ. ಅನೇಕ ವಸ್ತು ಪ್ರದರ್ಶನಗಳಲ್ಲಿ ಪ್ರಶಸ್ತಿಗಳನ್ನು ಪಡೆದಿವೆ. ಸೌಂದರ್ಯೋಪಕರಣಗಳಲ್ಲಿ ಇವಕ್ಕೆ ಮಿಗಿಲೆನಿಸುವವು ಬೇರೆ ಯಾವವೂ ಇಲ್ಲ ಎನಿಸಿಕೊಂಡಿವೆ. ಒಂದು ಸಾರಿ ಪರೀಕ್ಷಿಸಿ ನೋಡಿ, ತಾನೇ ತಿಳಿಯುತ್ತೆ !!




## ಮಣ್ಯಂ ಅಂಡ್ ಕಂಪನಿ, ಮದ್ರಾಸು.

Printed & Published by K. Jeevanna Rao at Prajamata Power Press, Bangalore City. Editor: Dr. R SHIVARAM.